ಉಪನ್ಯಾಸ ಗ್ರಂಥಮಾಲೆ

೮೨

# ನಮ್ಮ ರೈತರೇಕೆ ಹಿಂದುಳಿದಿದ್ದಾರೆ?

ಎಂ. ಸಿ. ಕೊಡ್ಲಿ, ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಅಗಸ್ಟ್, ೧೯೭೫

ರಜತ ಮಹೋತ್ಸವದ ಪ್ರಕಟನೆ

ಉಪನ್ಯಾಸ ಗ್ರಂಥಮಾಲೆ

೮೨

# ನಮ್ಮ ರೈತರೇಕೆ ಹಿಂದುಳಿದಿದ್ದಾರೆ?

ಎಂ. ಸಿ. ಕೊಡ್ಲಿ, ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಅಗಸ್ಟ್, ೧೯೭೫

ಪ್ರಕಾಶಕರು :
**ಎಸ್. ಎಸ್. ಒಡೆಯರ** ಎಂ. ಎ., ಎಲ್‌ಎಲ್. ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ೩,೦೦೦ ಪ್ರತಿಗಳು
ಡಿಶಂಬರ, ೧೯೬೮
ದ್ವಿತೀಯ ಮುದ್ರಣ : ೫೦೦೦ ಪ್ರತಿಗಳು
ಆಗಸ್ಟ್, ೧೯೭೫



ಬೆಲೆ : ೭೫ ಪೈಸೆ

ಮುದ್ರಕರು :
**ಶ್ರೀಮತಿ ಶಾಂತಾ ಎಚ್. ಬಳೂಟಗಿ,**
ಶಿವಾನಂದ ವರ್ಕ್ಸ್, ಜವಳಿಪೇಟ,
ಧಾರವಾಡ

# ಮುನ್ನುಡಿ

## ( ದ್ವಿತೀಯ ಮುದ್ರಣ )

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗು ವದಲ್ಲದೆ ಎಂಥ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯು ಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವ ರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ೨೧೪ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನ ಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗ ತಿಯ ಚಿನ್ಹೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ- ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೧-೮-೧೯೭೫

ಆರ್. ಸಿ. ಹಿರೇಮಠ
ಕುಲಪತಿಗಳು

# ಅ ರಿ ಕೆ

## (ದ್ವಿತೀಯ ಮುದ್ರಣ)

ಆರ್ಥಿಕ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಬೇಸಾಯದ ಉತ್ಪಾದನೆಯನ್ನು ಹೆಚ್ಚಿಸುವದು ಒಂದು ದೊಡ್ಡ ಸಮಸ್ಯೆಯಾಗಿದೆ. ಯಾಕೆಂದರೆ ಸುಧಾರಿಸಿದ ಬೇಸಾಯವು ದೇಶದ ಆರ್ಥಿಕ ಅಭಿವೃದ್ಧಿಗೆ ಅಡಿಪಾಯವಾಗಿರುತ್ತದೆ.

ನಮ್ಮ ದೇಶದ ಬೇಸಾಯವು ಎಷ್ಟೇ ವೈವಿಧ್ಯಪೂರ್ಣ ವಿದ್ದಾಗ್ಯೂ, ಹಿಂದುಳಿದಿದೆಯೆಂದು ಹೇಳಬಹುದು. ಕಳೆದ ಅನೇಕ ವರುಷಗಳಿಂದ ನಾವು ಪಂಚವಾರ್ಷಿಕ ಯೋಜನೆಗಳ ಮೂಲಕ ನಮ್ಮ ಬೇಸಾಯದಲ್ಲಿ ಪ್ರಗತಿ ಸಾಧಿಸಲು ಪ್ರಯತ್ನಿಸುತ್ತಿದ್ದೇವೆ. ಆದಾಗ್ಯೂ ಸಹಿತ ನಮ್ಮ ದೇಶವು ಇನ್ನೂ ಆಹಾರದಲ್ಲಿ ಸ್ವಾವಲಂಬಿಯಾಗದಿರುವದು ವಿಷಾದ ಕರ.

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಉಪನ್ಯಾಸಮಾಲೆಯ ಅಂಗವಾಗಿ ೬-೭-೧೯೬೮ರಂದು ಬಾಗೇವಾಡಿಯಲ್ಲಿ ನಾನು ಮಾಡಿದ ಭಾಷಣವನ್ನು ಇಲ್ಲಿ ವಿಸ್ತರಿಸಿ ಬರೆದಿದ್ದೇನೆ. ವಿಸ್ತರಣ ಉಪನ್ಯಾಸಮಾಲೆಯಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಟ್ಟ, ಹಾಗೂ ನನ್ನ ಭಾಷಣವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ಒಪ್ಪಿಕೊಂಡ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ.

—ಎಂ. ಸಿ. ಕೊಡ್ಲಿ

ಅರ್ಥಶಾಸ್ತ್ರ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೫-೮-೧೯೭೫

# ಪ ರಿ ವಿ ಡಿ

# ೧ ಪೀಠಿಕೆ

ನಮ್ಮ ದೇಶವು ಯಾವಾಗಲೂ ಬೇಸಾಯ ಪ್ರಧಾನವಾದ ದೇಶ. ೧೦೦ಕ್ಕೆ ೭೦ರಷ್ಟು ಜನರು ಬೇಸಾಯವನ್ನವಲಂಬಿಸಿ ಜೀವಿಸುತ್ತಾರೆ. ಮತ್ತು ರಾಷ್ಟ್ರೀಯ ಉತ್ಪನ್ನದಲ್ಲಿ ಶೇಕಡಾ ೪೮ರಷ್ಟು ಉತ್ಪನ್ನವು ಬೇಸಾಯದಿಂದ ಬರುತ್ತದೆ. ನಮ್ಮ ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಬೇಸಾಯವು ಅನೇಕ ಕಾರಣಗಳಿಂದ ಬಹಳ ಪ್ರಾಮುಖ್ಯವಾದ ಪಾತ್ರ ವಹಿಸಿದೆ.

ಮೊದಲನೆಯದಾಗಿ ಜನರಿಗೆ ಅವಶ್ಯವಾಗಿ ಬೇಕಾದ ಆಹಾರ ಧಾನ್ಯವನ್ನು ಬೇಸಾಯವು ಒದಗಿಸುತ್ತದೆ. ಅಭಿವೃದ್ಧಿ ಹೊಂದುತ್ತಿರುವ ಹಿಂದುಸ್ಥಾನದಂತಹ ದೇಶಗಳಲ್ಲಿ ಆಹಾರ ಧಾನ್ಯಗಳ ಬೇಡಿಕೆಯು ಅನೇಕ ಕಾರಣಗಳಿಂದಾಗಿ ಹೆಚ್ಚುತ್ತಾ ನಡೆದಿದೆ. ಅವುಗಳಲ್ಲಿ ಮುಖ್ಯವಾದುದು ಜನಸಂಖ್ಯೆಯ ಬೆಳವಣಿಗೆ. ನಮ್ಮ ದೇಶದಲ್ಲಿ ಜನಸಂಖ್ಯೆಯು ಪ್ರತಿ ವರುಷ ೨.೫ ಪ್ರಮಾಣದಂತೆ ಬೆಳೆಯುತ್ತ ನಡೆದಿರುವದರಿಂದ ಜನರಿಗೆ

ಈಗಿನಷ್ಟೇ ಆಹಾರವನ್ನು ಪ್ರತಿಯೊಬ್ಬನಿಗೆ ಒದಗಿಸಬೇಕಾದಲ್ಲಿ ನಮ್ಮ ಆಹಾರದ ಉತ್ಪಾದನೆಯು ವರುಷಕ್ಕೆ ಕನಿಷ್ಠ ೨.೫ ಪ್ರಮಾಣದಂತೆ ಹೆಚ್ಚಬೇಕು. ಇದಲ್ಲದೆ ಅಭಿವೃದ್ಧಿ ಹೊಂದುತ್ತಿರುವ ಹಿಂದುಸ್ಥಾನದಂತಹ ರಾಷ್ಟ್ರಗಳಲ್ಲಿ ಆಹಾರ ಧಾನ್ಯಗಳ ಬೇಡಿಕೆಯು ಜನಸಂಖ್ಯೆಯ ಬೆಳವಣಿಗೆಯ ಗತಿಗಿಂತ ಹೆಚ್ಚಿಗಿದೆ. ಯಾಕೆಂದರೆ ಜನರು ತಮ್ಮ ಹೆಚ್ಚಾದ ಆದಾಯದ ದೊಡ್ಡ ಪಾಲನ್ನು ಆಹಾರಕ್ಕಾಗಿಯೇ ಖರ್ಚು ಮಾಡುತ್ತಾರೆ. ಜನರ ಆರ್ಥಿಕ ಪರಿಸ್ಥಿತಿ ಸುಧಾರಿಸಿದಂತೆ ಅವರು ಹೆಚ್ಚಿಗೆ ಆಹಾರವನ್ನು ಸೇವಿಸುತ್ತಾರೆ. ಆದ್ದರಿಂದ ಆಹಾರ ಧಾನ್ಯಗಳ ಬೇಡಿಕೆಯು ಹೆಚ್ಚುತ್ತದೆ. ಹೀಗೆ ಆಹಾರ ಧಾನ್ಯಗಳ ಬೇಡಿಕೆಯು ಹೆಚ್ಚಾದಾಗ ಅವುಗಳ ಉತ್ಪಾದನೆಯು ಹೆಚ್ಚದಿದ್ದಲ್ಲಿ ಬೆಲೆಗಳು ಏರಿ ಅತಿ ಪ್ರಸರಣ ಉತ್ಪನ್ನವಾಗುತ್ತದೆ. ಇದರಿಂದ ಜನರಿಗೆ ತೊಂದರೆಯಾಗಿ ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಿಯುಂಟಾಗುತ್ತದೆ. ಆದ್ದರಿಂದ ಅಭಿವೃದ್ಧಿ ಕಾರ್ಯಗಳು ಸರಾಗವಾಗಿ ಸಾಗಲು ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಕೊರತೆ ಬೀಳಬಾರದು. ಆಹಾರ ಧಾನ್ಯಗಳ ಸ್ವಾವಲಂಬನೆಯು ಔದ್ಯೋಗಿಕ ಪ್ರಗತಿಗೆ ಅಡಿಪಾಯವೆನ್ನಬಹುದು. ಆಹಾರ ಧಾನ್ಯಗಳಲ್ಲದೆ ಔದ್ಯೋಗೀಕರಣಕ್ಕೆ ಬೇಕಾದ ಕಚ್ಚಾ ಸರಕುಗಳನ್ನು ಬೇಸಾಯವು ಒದಗಿಸುತ್ತದೆ. ಔದ್ಯೋಗೀಕರಣ ಹೆಚ್ಚಿದಂತೆಲ್ಲ ಇಂಥ ಕಚ್ಚಾ ಸರಕುಗಳ ಉತ್ಪಾದನೆಯೂ ಹೆಚ್ಚಬೇಕು.

ಎರಡನೆಯದಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಬೇಸಾಯದ ವಸ್ತುಗಳನ್ನು ಪರದೇಶಗಳಿಗೆ ರಪ್ತುಮಾಡಿ ವಿದೇಶ ವಿನಿಮಯವನ್ನು ಗಳಿಸಬಹುದು. ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಪರದೇಶದಿಂದ ಯಂತ್ರೋಪಕರಣಗಳನ್ನು ತರಿಸಬೇಕಾಗುವದರಿಂದ ಅವುಗಳನ್ನು ಕೊಳ್ಳಲು ವಿದೇಶ ವಿನಿಮಯ ಅವಶ್ಯ. ಆದ್ದರಿಂದ ಅಭಿವೃದ್ಧಿ ಹೊಂದುತ್ತಿರುವ ಹಿಂದುಸ್ಥಾನದಂತಹ ದೇಶಗಳು ತಮ್ಮ ಬೇಸಾಯವನ್ನು ಮೊದಲು ಸುಧಾರಿಸಬೇಕು.

ಮೂರನೆಯದಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಔದ್ಯೋಗಿಕ ರಂಗಗಳಿಗೆ ಬೇಕಾದ ಶ್ರಮಿಕರನ್ನು ಬೇಸಾಯವೇ ಒದಗಿಸುತ್ತದೆ. ಬೇಸಾಯದಲ್ಲಿ ಪ್ರಗತಿಯಾದಂತೆ, ಮತ್ತು ದೇಶದಲ್ಲಿ ಆರ್ಥಿಕ ಅಭಿವೃದ್ಧಿಯಾದಂತೆ, ಬೇಸಾಯವನ್ನವಲಂಬಿಸಿ ಜೀವಿಸುವ ಜನರು ಕಡಿಮೆಯಾಗುತ್ತ ಹೋಗುತ್ತಾರೆ. ಹೀಗೆ ಬೇಸಾಯ ರಂಗವು ಬೇರೆ ರಂಗಗಳಿಗೆ ಶ್ರಮಿಕರು ಬೇಕಾದಾಗ ಅವರನ್ನು ಆ ರಂಗಗಳಿಗೆ ಬಿಟ್ಟು ಕೊಡುತ್ತದೆ. ಬೇಸಾಯ ರಂಗದಲ್ಲಿ ಪ್ರಗತಿಯಾದರೆ ಮಾತ್ರ ಇದು ಸಾಧ್ಯ. ಬೇಸಾಯ ರಂಗದಲ್ಲಿ ಪ್ರಗತಿಯಾದಂತೆ ಆ ರಂಗದಲ್ಲಿ ಕಡಿಮೆ ಜನರು ಬೇಕಾಗುತ್ತಾರೆ.

ನಾಲ್ಕನೆಯದಾಗಿ ಬೇಸಾಯ ರಂಗವು ದೇಶದ ಆರ್ಥಿಕ ಅಭಿವೃದ್ಧಿಗೆ ಬೇಕಾದ ಬಂಡವಾಳವನ್ನು ಒದಗಿಸಬೇಕಾಗುತ್ತದೆ.

ಅಭಿವೃದ್ಧಿ ಹೊಂದುತ್ತಿರುವ ಹಿಂದುಸ್ಥಾನದಂತಹ ದೇಶದಲ್ಲಿ ಬೇಸಾಯವೇ ಪ್ರಧಾನ ರಂಗವಾಗಿರುವದರಿಂದ ಬೇಸಾಯವೇ ಉಳಿದ ರಂಗಗಳಿಗೆ ಬಂಡವಾಳವನ್ನು ಒದಗಿಸ ಬೇಕಾಗುತ್ತದೆ. ಈಗ ಅಭಿವೃದ್ಧಿ ಹೊಂದಿರುವ ದೇಶಗಳ ಆರ್ಥಿಕ ಇತಿಹಾಸವನ್ನು ನಾವು ಕೂಲಂಕಷವಾಗಿ ನೋಡಿದರೆ ಅವುಗಳ ಅಭಿವೃದ್ಧಿಯಲ್ಲಿ ಬೇಸಾಯವು ಆಡಿದ ಪಾತ್ರ ನಮ್ಮ ಗಮನಕ್ಕೆ ಬರುತ್ತದೆ. ಉದಾಹರಣಾರ್ಥವಾಗಿ ನಾವು ಜಪಾನ ದೇಶವನ್ನು ತೆಗೆದುಕೊಂಡರೆ, ಆ ದೇಶದಲ್ಲಿ ೧೮೯೩ ರಿಂದ ೧೮೯೭ರ ವರೆಗೆ ಶೇಕಡಾ ೮೦ ರಷ್ಟು ತೆರಿಗೆಯು ಬೇಸಾಯದಿಂದಲೇ ಬಂದಿತೆಂದು ಹೇಳಲಾಗುತ್ತಿದೆ. ಅದೇ ರೀತಿಯಾಗಿ ಕಮ್ಯೂನಿಸ್ಟ ದೇಶಗಳಾದ ರಶಿಯಾ ಮತ್ತು ಚೀನಾ ಬೇಸಾಯದ ಮೇಲೆ ಒಂದಿಲ್ಲೊಂದು ರೀತಿಯಿಂದ ತೆರಿಗೆಗಳನ್ನು ಹೇರಿ ದೇಶದ ಅಭಿವೃದ್ಧಿಗೆ ಆದನ್ನು ಉಪಯೋಗಿಸಿವೆಯೆಂದು ತಿಳಿದು ಬರುತ್ತದೆ. ಆದ್ದರಿಂದ ಬೇಸಾಯದ ಅಭಿವೃದ್ಧಿಯು ದೇಶದ ಪ್ರಗತಿಗೆ ಅತಿ ಮುಖ್ಯ.

ಕೊನೆಯದಾಗಿ ಔದ್ಯೋಗಿಕ ಸರಕುಗಳಿಗೆ ಬೇಸಾಯವು ಒಳ್ಳೆಯ ಪೇಟೆಯೂ ಅಹುದು. ಅರಿವೆ, ಗೊಬ್ಬರ, ಬೇಸಾಯದ ಉಪಕರಣಗಳು ಮುಂತಾದ ಸಾಮಾನುಗಳನ್ನು ರೈತರು ಕೊಳ್ಳುವದರಿಂದ ಅಂಥ ಉದ್ಯೋಗಗಳಿಗೆ ಪ್ರೋತ್ಸಾಹ ಸಿಕ್ಕು ಅವು ಬೆಳೆಯುತ್ತವೆ. ದೇಶದ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ನೋಡಲಾಗಿ ಬೇಸಾಯ ಸುಧಾರಿಸಿ ರೈತರ ಉತ್ಪನ್ನವು

ಹೆಚ್ಚಬೇಕು, ಅಂದರೆ ಹೆಚ್ಚಿದ ಉತ್ಪನ್ನದಿಂದ ಬೇಸಾಯುಗಾರರು ಔದ್ಯೋಗಿಕ ಸರಕುಗಳನ್ನು ಕೊಳ್ಳುತ್ತಾರೆ. ಬೇಸಾಯುದ ಉತ್ಪಾದನೆ ಹೆಚ್ಚದ ಹೊರತು ದೇಶದ ಆರ್ಥಿಕ ಅಭಿವೃದ್ಧಿಯಾಗಲಾರದು. ಬೇಸಾಯುವು ಸುಧಾರಿಸಲು ಪ್ರತಿಯೊಬ್ಬ ರೈತನೂ ಸುಧಾರಿಸಬೇಕು.

ನಮ್ಮ ರೈತರು ಹಿಂದುಳಿಯುಲು ಅನೇಕ ಕಾರಣಗಳುಂಟು. ಇವುಗಳಲ್ಲಿ ನಾವು ನೈಸರ್ಗಿಕ, ಆರ್ಥಿಕ ಹಾಗೂ ಸಾಮಾಜಿಕ ಕಾರಣಗಳೆಂದು ಮೂರು ಭಾಗಗಳನ್ನು ಮಾಡಬಹುದು.

## ೨ ನೈಸರ್ಗಿಕ ಕಾರಣಗಳು

ನಮ್ಮ ರೈತನು ನಿಸರ್ಗದ ಕೈಯಲ್ಲಿಯ ಕೂಸಾಗಿದ್ದಾನೆ. ಅತಿವೃಷ್ಟಿ, ಅನಾವೃಷ್ಟಿ, ಬೆಳೆಗಳ ರೋಗ, ಕ್ರಿಮಿ-ಕೀಟಕಗಳು ಮತ್ತು ಭೂಮಿಯ ಸವಕಳಿ ಎಷ್ಟೋ ವೇಳೆ ಬೆಳೆಗಳನ್ನು ನಾಶ ಮಾಡುತ್ತವೆ. ನಮ್ಮ ದೇಶದಲ್ಲೀಗ ಶೇಕಡಾ ೨೦ ಎಕರೆಯಷ್ಟು ಭೂಮಿಯು ನೀರಾವರಿಯ ಸೌಲಭ್ಯ ಪಡೆದಿದೆ. ಉಳಿದ ಶೇಕಡಾ ೮೦ರಷ್ಟು ಎಕರೆ ನೀರಿಗಾಗಿ ಮಳೆಯನ್ನೇ ಅವಲಂಬಿಸಿದೆ. ಆದ್ದರಿಂದ ಪ್ರತಿವರುಷ ದೇಶದ ಒಂದಿಲ್ಲೊಂದು ಭಾಗದಲ್ಲಿ ಮಳೆಯಿಲ್ಲದೆ ಬರಗಾಲ ಪರಿಸ್ಥಿತಿಯು ಉತ್ಪನ್ನವಾಗುತ್ತದೆ. ನಿಸರ್ಗದ ವಿಕೋಪದಿಂದಾಗುವ ಎಷ್ಟೋ ಹಾನಿಗಳನ್ನು ನಾವು ವೈಜ್ಞಾನಿಕ ಪ್ರಗತಿಯ ಫಲದಿಂದ ಕಡಿಮೆ ಮಾಡಬಹುದು. ಭೂಮಿಯ ಸವಕಳಿಯನ್ನು ಹೆಚ್ಚಿಗೆ ಗಿಡ-ಮರಗಳನ್ನು ಬೆಳೆಯುವದರಿಂದ ಕಡಿಮೆ ಮಾಡಬಹುದು. ಬೆಳೆಗಳ ರೋಗಗಳನ್ನು ಕ್ರಿಮಿನಾಶಕಗಳನ್ನು ಉಪಯೋಗಿಸುವದರಿಂದ ಕಡಿಮೆ ಮಾಡಬಹುದು. ಮಳೆ ಬಾರದೆ ಬರಗಾಲ ಪರಿಸ್ಥಿತಿ ಉತ್ಪನ್ನವಾದಲ್ಲಿ, ನಾವು ಕೃತ್ರಿಮ ಮಳೆ ತರಿಸದೇ ಹೋದರೂ, ಬೆಳೆಯ ವಿಮೆ ಯೋಜನೆಯಿಂದ ರೈತರಿಗಾಗುವ ತೊಂದರೆಗಳನ್ನು ಕಡಿಮೆ ಮಾಡಬಹುದು.

## ೩ ಆರ್ಥಿಕ ಕಾರಣಗಳು

### (೧) ಜನಸಂಖ್ಯೆಯ ಭಾರ :

ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯು ಒಂದು ದೊಡ್ಡ ಸಮಸ್ಯೆಯೇ ಆಗಿದೆ. ನಮ್ಮ ದೇಶದ ಜನ ಸಂಖ್ಯೆಯು ೧೯೬೧ರ ಜನಗಣತಿಯ ಪ್ರಕಾರ ೪೩೯೨ ಲಕ್ಷ ವಿತ್ತು. ನಮ್ಮ ದೇಶದ ಜನಸಂಖ್ಯೆಯು ೧೯೦೧ರಿಂದ ಕೆಳಗಿನಂತೆ ಬೆಳೆದಿದೆ:

| ಜನ ಗಣತಿಯ ವರುಷ | ಜನಸಂಖ್ಯೆ (ಲಕ್ಷದಲ್ಲಿ) | ಹತ್ತು ವರುಷ ಗಳಲ್ಲಿಯ ಜನಸಂಖ್ಯೆಯ ಹೆಚ್ಚಳ ಅಥವಾ ಇಳಿತ (ಲಕ್ಷದಲ್ಲಿ) | ಹತ್ತು ವರುಷ ಗಳಲ್ಲಿಯ ಜನ ಸಂಖ್ಯೆಯ ಶೇಕಡ ವ್ಯತ್ಯಾಸ |
|---|---|---|---|
| ೧೯೦೧ | ೨೩೬೩ | — | — |
| ೧೯೧೧ | ೨೫೨೧ | + ೧೫೮ | + ೫.೭೩ |

| | | | | | |
|---|---|---|---|---|---|
| ೧೯೨೧ | ೨೫೧೪ | – | ೭ | – | ೦.೩೧ |
| ೧೯೩೧ | ೨೭೯೦ | + | ೨೭೬ | + | ೧೧.೦೧ |
| ೧೯೪೧ | ೩೧೮೨ | + | ೩೯೭ | + | ೧೪.೨೨ |
| ೧೯೫೧ | ೩೬೧೧ | + | ೪೨೪ | + | ೧೩.೩೧ |
| ೧೯೬೧ | ೪೩೯೨ | + | ೭೮೧ | + | ೨೧.೫೦ |
| ೧೯೭೧ | ೫೪೬೯ | + | ೧೦೭೭ | + | ೨೪.೫೭ |

ನಮ್ಮ ದೇಶದ ಜನಸಂಖ್ಯೆಯು ೧೯೨೧ರಿಂದೀಚೆಗೆ ತೀವ್ರಗತಿಯಿಂದ ಬೆಳೆಯುತ್ತಿದೆಯೆಂದು ಹೇಳಬಹುದು. ನಮ್ಮ ದೇಶದ ಜನಸಂಖ್ಯೆಯು ಈ ರೀತಿ ಬೆಳೆಯಲು ಈಗಿನ ತಾಯಂದಿರು ಹೆಚ್ಚಿಗೆ ಮಕ್ಕಳನ್ನು ಹಡೆಯುತ್ತಾರೆಂದು ಜನಸಾಮಾನ್ಯರ ಕಲ್ಪನೆ ಇರಬಹುದು. ಆದರೆ ನಾವು ಜನನ ಮತ್ತು ಮರಣಗಳ ಸಂಖ್ಯೆಗಳನ್ನು ನೋಡಿದರೆ, ಜನನ ಪ್ರಮಾಣವು ಹೆಚ್ಚಾಗದೆ ಇತ್ತಿತ್ತಲಾಗಿ ಕಡಿಮೆಯಾಗಿರುವದನ್ನು ಕಂಡುಕೊಳ್ಳಬಹುದು. ೧೯೨೧ರಲ್ಲಿ ನಮ್ಮ ದೇಶದಾದ್ಯಂತ ಜನನ ಪ್ರಮಾಣವು ಒಂದು ಸಾವಿರ ಜನಸಂಖ್ಯೆಗೆ ೪೯.೨ ಇತ್ತು. ಮರಣ ಪ್ರಮಾಣವು ಒಂದು ಸಾವಿರಕ್ಕೆ ೪೮.೬ ಇತ್ತು. ಆದ್ದರಿಂದ ಒಂದು ಸಾವಿರಕ್ಕೆ, ಒಂದು ವರುಷಕ್ಕೆ, ಜನಸಂಖ್ಯೆ ಬೆಳೆಯುವ ಪ್ರಮಾಣ ಕೇವಲ ೦.೬ ಇತ್ತು. ಆದರೆ ೧೯೬೧ರಲ್ಲಿ ಜನನ ಪ್ರಮಾಣವು ಒಂದು ಸಾವಿರಕ್ಕೆ ೪೧.೭ ಮತ್ತು ಮರಣ ಪ್ರಮಾಣವು ೨೨.೮ ಇದ್ದವು. ಜನಸಂಖ್ಯೆ ಬೆಳೆಯುವ ಪ್ರಮಾಣವು ಸಾವಿರಕ್ಕೆ ೧೯ ಎಂದಾಯಿತು.

೧೯೬೧ರ ಜನಗಣತಿಯ ಪ್ರಕಾರ ನಮ್ಮ ದೇಶದಲ್ಲಿ ಜನನ ಪ್ರಮಾಣವು ಸಾವಿರಕ್ಕೆ ೪೯.೮ ಇದ್ದು ಮರಣ ಪ್ರಮಾಣವು ೧೫.೬ ಎಂದು ಅಂದಾಜುಮಾಡಲಾಗಿದೆ. ಆದ್ದರಿಂದ ಜನಸಂಖ್ಯೆ ಬೆಳೆಯಲು ನಮ್ಮಲ್ಲಿ ಜನನ ಪ್ರಮಾಣವು ಹೆಚ್ಚಾಗದೆ ಮರಣ ಪ್ರಮಾಣವು ಕಡಿಮೆಯಾಗಿರುವದೇ ಕಾರಣವೆಂದು ಕಂಡುಕೊಳ್ಳಬಹುದು. ೧೯೩೧ರ ಮೊದಲು ನಮ್ಮ ದೇಶದಲ್ಲಿ ವಾಹನ ಸೌಕರ್ಯಗಳು ಸಾಕಷ್ಟು ಇಲ್ಲದ್ದರಿಂದ ದೇಶದ ಒಂದಿಲ್ಲೊಂದು ಭಾಗದಲ್ಲಿ ಮಳೆಯಾಗದೆ ಬರಗಾಲ ಪರಿಸ್ಥಿತಿಯಿಂದ ಎಷ್ಟೋ ಜನರು ಮರಣಹೊಂದುತ್ತಿದ್ದರು. ಈಗ ನಾವು ರೇಲ್ವೆ ಹಾಗೂ ರಾಷ್ಟ್ರೀಯ ಹೆದ್ದಾರಿಗಳ ಮುಖಾಂತರ ಆಹಾರ ಧಾನ್ಯಗಳನ್ನು ಕೆಲವೇ ದಿನಗಳಲ್ಲಿ ದೇಶದ ಯಾವದೇ ಭಾಗಕ್ಕಾದರೂ ಸಾಗಿಸಬಹುದಾದುದರಿಂದ ಅಂಥ ಬರಗಾಲ ಪರಿಸ್ಥಿತಿಯು ಈಗ ಉತ್ಪನ್ನವಾಗುವದಿಲ್ಲ. ಮತ್ತು ೧೯೩೧ರ ಮೊದಲು ನಮ್ಮ ದೇಶದಲ್ಲಿ ವೈದ್ಯಕೀಯ ಸೌಲಭ್ಯಗಳು ಇಲ್ಲದ್ದರಿಂದ ಕಾಲರಾ, ಪ್ಲೇಗ ಮುಂತಾದ ರೋಗಗಳಿಗೆ ಲಕ್ಷಗಟ್ಟಲೆ ಜನರು ಬಲಿಯಾಗುತ್ತಿದ್ದರು. ಈಗ ಸುಧಾರಿಸಿದ ವೈದ್ಯಕೀಯ ಸೌಲಭ್ಯದಿಂದ ಅಂಥ ರೋಗಗಳು ಸಂಪೂರ್ಣ ನಿರ್ನಾಮವಾಗಿವೆಯೆಂದರೂ ಅಡ್ಡಿಯಿಲ್ಲ. ವಿಜ್ಞಾನದ ಸಹಾಯದಿಂದ ಮನುಷ್ಯನು ತನ್ನ ಜೀವಮಾನವನ್ನು ಹೆಚ್ಚಿಸುವ ಪ್ರಯತ್ನ ಮಾಡುತ್ತಾನೆ. ಅದು ಒಳ್ಳೆಯದೇ. ಆದರೆ ಅಷ್ಟೇ ಪ್ರಮಾಣದಿಂದ ನಮ್ಮ ದೇಶದಲ್ಲಿ ಜನನ ಪ್ರಮಾಣವನ್ನು ನಿಯಂತ್ರಣದಲ್ಲಿ ತರಲಿಕ್ಕಾಗಲಿ

ಅಥವಾ ಆಹಾರ ಧಾನ್ಯವನ್ನು ಉತ್ಪಾದಿಸುವದರಲ್ಲಾಗಲಿ ವಿಜ್ಞಾನದ ಉಪಯೋಗ ಮಾಡಿಕೊಂಡಿಲ್ಲವಾದ್ದರಿಂದ ಈಗಿನ ಅಸಮತೋಲತೆ ತಲೆದೋರಿದೆ.

ಬೆಳೆಯುತ್ತಿರುವ ನಮ್ಮ ಜನಸಂಖ್ಯೆಯು ಬೇಸಾಯದ ಮೇಲೆ ಹೆಚ್ಚು ಭಾರವನ್ನು ಹಾಕಿದೆ. ೧೯೬೧ರಲ್ಲಿ ೩೦೭೩ ಲಕ್ಷ ಜನರು ಬೇಸಾಯವನ್ನವಲಂಬಿಸಿ ಜೀವಿಸುತ್ತಿದ್ದರು. ನಮ್ಮ ದೇಶದಲ್ಲಿ ೧೯೬೦-೬೧ರಲ್ಲಿ ಒಟ್ಟು ಬಿತ್ತಿದ ಜಮೀನು ೩೪೩೬ ಲಕ್ಷ ಎಕರೆಗಳು. ಅಂದರೆ ಬೇಸಾಯವನ್ನವಲಂಬಿಸಿ ಜೀವಿಸುವ ಪ್ರತಿ ೮೯ ಜನರಿಗೆ ದೊರೆಯುವ ಜಮೀನು ೧೦೦ ಎಕರೆಗಳು. ಬೇಸಾಯವನ್ನವಲಂಬಿಸಿ ಜೀವಿಸುವ ಪ್ರತಿಯೊಬ್ಬನಿಗೆ ದೊರೆಯುವ ಜಮೀನು ೧ ಎಕರೆ ೫ ಗುಂಟೆಗಳು ಮಾತ್ರ.

ನಮ್ಮ ದೇಶದಲ್ಲಿ ೧೯೬೧ರ ಜನಗಣತಿಯ ಪ್ರಕಾರ ೯೯೫ ಲಕ್ಷ ಬೇಸಾಯಗಾರರು ಮತ್ತು ೩೧೫ ಲಕ್ಷ ಬೇಸಾಯದ ಕೂಲಿಕಾರರು ಇದ್ದರು. ೧೯೫೧ರಲ್ಲಿ ಬೇಸಾಯಗಾರರ ಸಂಖ್ಯೆ ೭೦೦ ಲಕ್ಷ ಮತ್ತು ಕೂಲಿಕಾರರ ಸಂಖ್ಯೆ ೨೮೦ ಲಕ್ಷವಿತ್ತು. ಅಂದರೆ ೧೯೬೧ರಲ್ಲಿ ಬೇಸಾಯಗಾರರ ಸಂಖ್ಯೆಯಲ್ಲಿ ಶೇಕಡಾ ೪೩ರಷ್ಟು ಮತ್ತು ಕೂಲಿಕಾರರ ಸಂಖ್ಯೆಯಲ್ಲಿ ೧೪ರಷ್ಟು ಹೆಚ್ಚಳವಾಗಿದೆ. ಜನಸಂಖ್ಯೆ ಬೆಳೆಯುತ್ತ ಹೋದಂತೆ ಹಿಡುವಳಿಯ ಗಾತ್ರ ಚಿಕ್ಕದಾಗುತ್ತ ಹೋಗುತ್ತದೆ. ಮತ್ತು ತುಂಡು ಜಮೀನುಗಳು ಹೆಚ್ಚಾಗುತ್ತ ಹೋಗುತ್ತವೆ.

ನಮ್ಮ ದೇಶದಲ್ಲಿ ಸರಾಸರಿ ಹಿಡುವಳಿಯ ಗಾತ್ರ ೭.೫೯ ಎಕರೆಯಾದರೆ ಅಮೇರಿಕೆಯಲ್ಲಿ ೨೧೫ ಎಕರೆ ಮತ್ತು ಇಂಗ್ಲಂಡಿನಲ್ಲಿ ೬೬ ಎಕರೆಗಳು. ಹಿಡುವಳಿಯ ಗಾತ್ರ ಕಡಿಮೆಯಿದ್ದಲ್ಲಿ ಉತ್ಪನ್ನವು ಕಡಿಮೆಯಾಗಿ ರೈತನ ಉಪಜೀವನಕ್ಕೆ ಸಾಲದಂತಾಗುತ್ತದೆ. ನಮ್ಮ ದೇಶದಲ್ಲಿ ಬೇಸಾಯಗಾರನ ಹಿಡುವಳಿಯು ಗಾತ್ರ ಚಿಕ್ಕದಾಗಿರುವದಲ್ಲದೇ ಈ ಭೂಮಿಯು ಒಂದೇ ಕಡೆಗೆ ಇರದೆ ಬೇರೆ ಬೇರೆ ಕಡೆಗೆ ಸಣ್ಣ ಸಣ್ಣ ತುಂಡುಗಳ ರೂಪದಲ್ಲಿ ಇರುತ್ತದೆ. ಅವಿಭಕ್ತ ಕುಟುಂಬಗಳು ಒಡೆದಂತೆಲ್ಲಾ ಭೂಮಿಯ ತುಂಡುಗಳೂ ಹೆಚ್ಚಾಗುತ್ತ ಹೋಗುತ್ತವೆ. ತುಂಡು ಭೂಮಿಗಳು ಬೇಸಾಯದಲ್ಲಿ ಸುಧಾರಣೆ ಮಾಡಲು ಆತಂಕ ಒಡ್ಡಿವೆ.

ಔದ್ಯೋಗಿಕ ಪ್ರಗತಿ ಹೊಂದಿದ ರಾಷ್ಟ್ರಗಳಲ್ಲಿ ಬೇಸಾಯವನ್ನವಲಂಬಿಸಿ ಜೀವಿಸುವ ಜನರು ಕಡಿಮೆ ಇರುತ್ತಾರೆ ಉದಾಹರಣಾರ್ಥವಾಗಿ - ಯು ಎಸ್. ಎ. ದಲ್ಲಿ ಬೇಸಾಯವನ್ನವಲಂಬಿಸಿ ಜೀವಿಸುವ ಜನರು ಶೇಕಡಾ ೧೨ ಮತ್ತು ಇಂಗ್ಲಂಡಿನಲ್ಲಿ ಶೇಕಡಾ ೬. ನಮ್ಮ ದೇಶದಲ್ಲಿ ಶೇಕಡಾ ೭೦.

ನಮ್ಮ ದೇಶದ ಬೇಸಾಯದಲ್ಲಿ ತಲೆಮರೆಸಿದ ನಿರುದ್ಯೋಗತನವು ಹೆಚ್ಚಾಗಿದೆ (Disguised unemployment). ಕೆಲವೊಂದು ಅಂದಾಜಿನ ಪ್ರಕಾರ ನಮ್ಮ ಬೇಸಾಯದಲ್ಲಿ ಶೇಕಡಾ ೨೫ರಷ್ಟು ಜನರು ನಿರುದ್ಯೋಗಿಗಳಾಗಿ

ರುವರು. ೧೩೧೦ ಲಕ್ಷ ಜನರು ನಮ್ಮ ಬೇಸಾಯದಲ್ಲಿ ಕೆಲಸ ಮಾಡುವವರ ಪೈಕಿ ೩೨೭೧ ಲಕ್ಷ ಜನರು ನಿರುದ್ಯೋಗಿಗಳು. ಈ ಜನರನ್ನು ಬೇಸಾಯ ಬಿಡಿಸಿ ಬೇರೆ ಕೆಲಸಗಳಿಗೆ ಹಚ್ಚಿದರೂ ಬೇಸಾಯದ ಉತ್ಪಾದನೆಯು ಕಡಿಮೆಯಾಗುವದಿಲ್ಲ. ಈ ಹೆಚ್ಚಾದ ಜನಸಂಖ್ಯೆಯು ಬೇಸಾಯದ ಮೇಲೆ ಭಾರವಾಗಿ ಬೇಸಾಯದ ಉತ್ಪನ್ನದಲ್ಲಿ ಉಳಿತಾಯವಾಗುವದಿಲ್ಲ. ಆದ್ದರಿಂದ ಇವರನ್ನು ಬೇರೆ ಕಡೆಗೆ ವರ್ಗಾಯಿಸಬೇಕು. ಔದ್ಯೋಗಿಕರಣವೇ ಇದಕ್ಕೆ ಉಪಾಯ. ಗ್ರಾಮಾಂತರ ವಿದ್ಯುದ್ಯೋಜನೆಯು ಜನರಿಗೆ ಬೇಸಾಯೇತರ ಉದ್ಯೋಗ ಕಲ್ಪಿಸಿ ಕೊಡುವದಾಗಿದೆ.

## ( ೨ ) ಗೊಬ್ಬರ :

ನಮ್ಮ ರೈತರು ಸಾವಿರಾರು ವರುಷಗಳಿಂದ ಭೂಮಿಗೆ ಸಾಕಷ್ಟು ಗೊಬ್ಬರ ಹಾಕದೆ ಬೆಳೆಗಳನ್ನು ಬೆಳೆಯುತ್ತಾ ಬಂದಿದ್ದಾರೆ. ಆದ್ದರಿಂದ ಭೂಮಿಯ ಫಲವತ್ತತೆ ಕಡಿಮೆಯಾಗಿದೆ. ನಾವು ಭೂಮಿಯಿಂದ ಒಂದು ಬೆಳೆ ತೆಗೆದುಕೊಂಡರೆ ಭೂಮಿಯಲ್ಲಿಯ ಅತಿ ಮುಖ್ಯ ಮೂರು ಘಟಕಗಳು ಕಡಿಮೆ ಬೀಳುತ್ತವೆ. ಅವು ಯಾವವೆಂದರೆ ನೈಟ್ರೋಜನ್, ಫಾಸ್ಫಾರಿಕ್ ಆಸಿಡ್ ಮತ್ತು ಪೋಟ್ಯಾಶ್. ಈ ಘಟಕಗಳು ಎಷ್ಟು ಕಡಿಮೆಯಾಗುತ್ತವೆಯೆಂಬುದು ಆಯಾ ಬೆಳೆಗಳನ್ನು ಅವಲಂಬಿಸಿದೆ.

ನಾವು ಭೂಮಿಯಿಂದ ತೆಗೆದುಕೊಂಡದ್ದನ್ನು ಭೂಮಿಗೆ ತಿರುಗಿ ಕೊಡಬೇಕಾಗುತ್ತದೆ. ಇಲ್ಲದೆ ಹೋದಲ್ಲಿ ಭೂಮಿಯ

ಫಲವತ್ತತೆ ಕಡಿಮೆಯಾಗುತ್ತದೆ. ನಮ್ಮ ರೈತರು ಸಾಕಷ್ಟು ಗೊಬ್ಬರವನ್ನು ಭೂಮಿಗೆ ಹಾಕದೇ ಇರುವ ಕಾರಣಗಳನ್ನು ನೋಡುವಾ.

ಸಗಣಿಯನ್ನು ನಮ್ಮ ರೈತರು ಉರುವಲಕ್ಕಾಗಿ ಉಪಯೋಗಿಸುತ್ತಾರೆ. ವರುಷಕ್ಕೆ ಸುಮಾರು ೨೫ ಕೋಟಿ ಟನ್ ಸಗಣಿಯನ್ನು ನಮ್ಮ ರೈತರು ಸುಡುತ್ತಾರೆ ಅನೇಕ ವರುಷಗಳಿಂದಲೂ ಸಗಣಿ ಗೊಬ್ಬರವು ಬಹು ಮುಖ್ಯವಾದ ಗೊಬ್ಬರವಾಗಿದೆ. ಇದರಲ್ಲಿ ಬೆಳೆಗಳಿಗೆ ಬೇಕಾದ ಅತಿ ಮುಖ್ಯ ಘಟಕಗಳೆಲ್ಲವೂ ದೊರೆಯುತ್ತವೆ. ಈ ಅಮೂಲ್ಯವಾದ ಸಗಣಿಯನ್ನು ಉಳಿತಾಯ ಮಾಡುವ ಕಾರ್ಯಕ್ರಮದ ಅಂಗವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ತೀವ್ರ ಬೆಳೆಯುವ ಉರುವಲು ಕಟ್ಟಿಗೆ ಗಿಡಗಳನ್ನು ಬೆಳೆಸುವ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಯೋಜನಾ ಆಯೋಗವು ನೇಮಿಸಿದ ತಜ್ಞರ ಸಮಿತಿಯು ಶಿಫಾರಸು ಮಾಡಿದೆ. ಈಗ ಉರುವಲಕ್ಕಾಗಿ ಉಪಯೋಗಿಸುವ ೨೫ ಕೋಟಿ ಟನ್ ಸಗಣಿಯನ್ನು ಉಳಿತಾಯ ಮಾಡಲು ಪ್ರತಿ ವರುಷ ೨ ೩/೧೦ ಕೋಟಿ ಟನ್ ಅಧಿಕ ಉರುವಲು ಕಟ್ಟಿಗೆಯು ಲಭ್ಯವಾಗಬೇಕಾಗುತ್ತದೆಯೆಂದೂ ತಜ್ಞರ ಸಮಿತಿಯು ಹೇಳಿದೆ ಹಳ್ಳಿಗಳಲ್ಲಿಯ ಕೆರೆ ಹಾಗೂ ಹೊಲಗಳ ಒಡ್ಡು, ಶಾಲೆ ಹಾಗೂ ಸಾರ್ವಜನಿಕ ಕಟ್ಟಡಗಳ ಆವಾರ, ಹಳ್ಳಿಯ ದಾರಿಗಳ ಸುತ್ತುಮುತ್ತಲಿನ ಬೀಳು ಭೂಮಿಯನ್ನು ಇಂಥ ಗಿಡಗಳನ್ನು ಬೆಳೆಯಲು ಉಪಯೋಗಿಸಬೇಕೆಂದು

ಸೂಚಿಸಿದೆ. ಸಮಾಜ ವಿಕಾಸ ಸಂಸ್ಥೆ, ಅರಣ್ಯ ಇಲಾಖೆ ಹಾಗೂ ಕಂದಾಯ ಇಲಾಖೆ ಈ ಯೋಜನೆಯನ್ನು ಕಾರ್ಯ ಗತಗೊಳಿಸಬೇಕೆಂದೂ ಆ ಸಮಿತಿಯು ಹೇಳಿದೆ.

ನಮ್ಮ ರೈತರು ಉಳಿದ ಸಗಣಿಯನ್ನು ಸಹಿತ ಸರಿಯಾದ ರೀತಿಯಲ್ಲಿ ಕಾಯ್ದಿಡುವದಿಲ್ಲ. ಸಗಣಿಯನ್ನು ಊರ ಹೊರಗಡೆ ಸಣ್ಣ ತಗ್ಗುಗಳಲ್ಲಿ ಹಾಕುತ್ತಾರೆ. ದನಕರುಗಳು ತುಳಿದಾಡಿ ಮತ್ತು ಬಿಸಿಲು ಗಾಳಿಗೆ ಒಣಗಿ ಅರ್ಧ ಗೊಬ್ಬರ ಹಾಳಾಗಿ ಹೋಗುತ್ತದೆ.

ನಮ್ಮ ರೈತರು ಧಾರ್ಮಿಕ ಕಾರಣಗಳಿಂದಾಗಿ ಮನುಷ್ಯನ ಮಲಮೂತ್ರಗಳನ್ನು ಗೊಬ್ಬರವನ್ನಾಗಿ ಮಾಡಿ ಉಪಯೋಗಿಸುವದಿಲ್ಲ. ಅದೇ ರೀತಿಯಾಗಿ ಎಲುಬು ಮತ್ತು ಮೀನುಗಳ ಗೊಬ್ಬರವನ್ನು ಸಹಿತ ಉಪಯೋಗಿಸುವದಿಲ್ಲ ನಮ್ಮ ರೈತರಿಗೆ ಗೊಬ್ಬರದ ಮಹತ್ವ ಗೊತ್ತಿಲ್ಲವೆಂದಲ್ಲ. ಆದರೆ ಬಡತನದ ಮೂಲಕ ಸಾಕಷ್ಟು ಗೊಬ್ಬರವನ್ನು ಎಲ್ಲ ಭೂಮಿಗಳಿಗೂ ಹಾಕುವದಾಗುವದಿಲ್ಲ. ಇದ್ದ ಗೊಬ್ಬರವನ್ನು ಹೆಚ್ಚಿಗೆ ಲಾಭದಾಯಕ ಪೀಕುಗಳಿಗೆ ಹಾಕುತ್ತಾರೆ.

ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರದ ಉಪಯೋಗ ಬಹಳ ಕಡಿಮೆ ಇದೆ. ಬೇಸಾಯದ ಸುಧಾರಣೆಯಲ್ಲಿ ರಾಸಾಯನಿಕ ಗೊಬ್ಬರದ ಪಾತ್ರ ಮಹತ್ವದ್ದು. ಸುಮಾರು ೯೪

ಸಾವಿರ ಟನ್ ರಾಸಾಯನಿಕ ಗೊಬ್ಬರ ೧೦ ಲಕ್ಷ ಎಕರೆ ಹೊಸ ಭೂಮಿಯಷ್ಟು ಉತ್ಪಾದನೆಯನ್ನು ಕೊಡುತ್ತದೆಯೆಂದು ಅಂದಾಜು ಮಾಡಲಾಗಿದೆ. ರಾಸಾಯನಿಕ ಗೊಬ್ಬರದ ಉತ್ಪಾದನೆಯು ನಮ್ಮಲ್ಲಿ ಕಡಿಮೆ ಇದೆ. ಮೂರನೆಯ ಪಂಚವಾರ್ಷಿಕ ಯೋಜನೆಯು ಗುರಿ ೮ ಲಕ್ಷ ಟನ್ ರಾಸಾಯನಿಕ ಗೊಬ್ಬರ ಉತ್ಪಾದಿಸುವದಿತ್ತು. ಆದರೆ ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ನಮ್ಮ ಉತ್ಪಾದನೆಯು ಕೇವಲ ೩.೯೩ ಲಕ್ಷ ಟನ್ ಮಾತ್ರ ಆಗಿತ್ತು.

( ೩ ) ಸುಧಾರಿಸಿದ ಬೀಜ :

ನಮ್ಮ ಬೇಸಾಯವು ಹಿಂದುಳಿಯಲು ಮತ್ತೊಂದು ಕಾರಣವೆಂದರೆ, ನಮ್ಮ ರೈತರು ಸುಧಾರಿಸಿದ ಬೀಜಗಳನ್ನು ಉಪಯೋಗಿಸದೆ ತಮ್ಮ ಹಳ್ಳಿಗಳಲ್ಲಿ ದೊರೆಯುವ ಬೀಜಗಳನ್ನು ಉಪಯೋಗಿಸುತ್ತಾರೆ. ನಮ್ಮ ರೈತರು ಬೀಜಕ್ಕಾಗಿ ತಮ್ಮ ಉತ್ಪಾದನೆಯ ಕೆಲವೊಂದು ಭಾಗವನ್ನು ತೆಗೆದಿಡುತ್ತಾರೆ. ಕೆಲವರು ದೊಡ್ಡ ರೈತರಿಂದ ಅಥವಾ ವ್ಯಾಪಾರಸ್ಥರಿಂದ ಬೀಜಗಳನ್ನು ಕೊಳ್ಳುತ್ತಾರೆ. ಇಂಥ ಬೀಜಗಳು ಅಷ್ಟು ಫಲವತ್ತಾಗಿರುವದಿಲ್ಲ. ನಮ್ಮ ರೈತರೆಲ್ಲರೂ ಸುಧಾರಿಸಿದ ಬೀಜಗಳನ್ನು ಉಪಯೋಗಿಸಿದರೆ ಉತ್ಪಾದನೆಯನ್ನು ನಾವು ಎಷ್ಟೋ ಪಾಲು ಹೆಚ್ಚಿಸಬಹುದು. ಇತ್ತೀಚೆಗೆ ಬಳಕೆಗೆ ಬಂದಿರುವ ಹೈಬ್ರಿಡ್ ಜೋಳದ ಬೀಜಗಳು ಇದಕ್ಕೆ ನಿದರ್ಶನವಾಗಬಲ್ಲವು.

ಸುಧಾರಿಸಿದ ಬೀಜದ ಜೊತೆಗೆ ನಮ್ಮ ರೈತರು ಬೆಳೆಯ ಸುರಕ್ಷಿತತೆಯ ಬಗೆಗೂ ಸಾಕಷ್ಟು ಕಾಳಜೀ ತೆಗೆದುಕೊಳ್ಳಬೇಕು. ಪ್ರತಿ ವರುಷವೂ ಮಿಡತೆ, ಇಲಿಗಳು ಮತ್ತು ಅನೇಕ ರೋಗಗಳಿಂದ ಬೆಳೆಗಳು ವಿಪರೀತ ನಾಶವಾಗುತ್ತವೆ. ಆದ್ದರಿಂದ ಪ್ರತಿಯೊಂದು ಗ್ರಾಮಗಳಲ್ಲಿಯೂ ಕ್ರಿಮಿನಾಶಕ ಔಷಧ ಮತ್ತು ಸಿಂಪಡಿಸುವ ಸಾಧನಗಳು ಇರಬೇಕು.

**( ೪ ) ಬೇಸಾಯದ ಉಪಕರಣಗಳು :**

ನಮ್ಮ ರೈತರು ಉಪಯೋಗಿಸುವ ಉಪಕರಣಗಳು ಸಾವಿರಾರು ವರುಷ ಹಳೆಯವೆನ್ನಬಹುದು. ವೈಜ್ಞಾನಿಕ ಪ್ರಗತಿಯು ನಮ್ಮ ರೈತನ ಉಪಕರಣಗಳ ಮೇಲೆ ಯಾವ ಪ್ರಭಾವವನ್ನೂ ಬೀರಿಲ್ಲ. ನಮ್ಮ ರೈತನು ಉಪಯೋಗಿಸುವ ರಂಟೆ, ಕುಂಟೆಗಳು ಹಳ್ಳಿಯ ಬಡಿಗರಿಂದ ತಯಾರಿಸಿದವುಗಳು. ಇವುಗಳಲ್ಲಿ ಸಾಕಷ್ಟು ಸುಧಾರಣೆ ಮಾಡಲು ಅವಕಾಶವಿದೆ. ಅನೇಕ ರಾಜ್ಯಸರಕಾರಗಳು ಸುಧಾರಿಸಿದ ರಂಟೆಗಳನ್ನು ಪ್ರಚಾರದಲ್ಲಿ ತರಲು ಪ್ರಯತ್ನ ಮಾಡಿವೆ. ಆದರೆ ಅವರ ಪ್ರಯತ್ನಕ್ಕೆ ಸಾಕಷ್ಟು ಯಶಸ್ಸು ಸಿಗಲಿಲ್ಲ. ಮೇಲಾಗಿ ಈ ಸುಧಾರಿಸಿದ ಉಪಕರಣಗಳನ್ನು ರಿಪೇರಿ ಮಾಡುವ ಸೌಲಭ್ಯ ಗ್ರಾಮಾಂತರ ಪ್ರದೇಶಗಳಲ್ಲಿಲ್ಲ.

ಬೇಸಾಯದ ಯಾಂತ್ರೀಕರಣವೆಂದರೆ ಬರಿಯ ಟ್ರಾಕ್ಟರಿನಿಂದ ಬೇಸಾಯ ಮಾಡುವದೆಂದು ಭಾವಿಸಬಾರದು. ನಮ್ಮ

ಬೇಸಾಯಗಾರರ ಹಿಡುವಳಿಯು ಗಾತ್ರ, ಚಿಕ್ಕದಿರುವದರಿಂದ ಟ್ರ್ಯಾಕ್ಟರ ಕೆಲವೇ ದೊಡ್ಡ ರೈತರ ಹೊರತಾಗಿ ಉಳಿದವರಿಗೆ ಉಪಯೋಗವಾಗಲಾರದು. ಸುಧಾರಿಸಿದ ರಂಟೆ, ಸುಧಾರಿಸಿದ ಉಪಕರಣಗಳಾದ ಸಲಕೆ, ಗುದ್ದಲಿ, ನೀರಾವರಿ ಪಂಪುಗಳು ಸುಧಾರಿಸಿದ ಕೂರಿಗೆ ಮುಂತಾದವುಗಳು ನಮ್ಮ ರೈತರಿಗೆ ಹೆಚ್ಚಿಗೆ ಲಾಭದಾಯಕವಾದವುಗಳಾಗಿವೆ.

( ೫ ) ನೀರಾವರಿ ಸೌಲಭ್ಯ :

ನಮ್ಮ ದೇಶದಲ್ಲಿಯ ಒಟ್ಟು ಭೂಮಿಯಲ್ಲಿ ಶೇಕಡಾ ೫೦ರಷ್ಟು ಭೂಮಿಯು ಬೆಳೆಗಳನ್ನು ಬೆಳೆಯಲು ಯೋಗ್ಯವಾಗಿದೆ. ಆದರೆ ಸಾಕಷ್ಟು ನೀರಾವರಿ ಸೌಲಭ್ಯವಿಲ್ಲದಿರುವದು ಒಂದು ದೊಡ್ಡ ಕೊರತೆಯಾಗಿದೆ. ಕಳೆದ ಅನೇಕ ವರುಷಗಳ ಪರಿಶ್ರಮದ ಫಲವಾಗಿ ಈಗ ನಮ್ಮ ದೇಶದಲ್ಲಿ ಶೇಕಡಾ ೨೦ರಷ್ಟು ಭೂಮಿಗೆ ನೀರಾವರಿ ಸೌಲಭ್ಯವೊದಗಿದೆ. ಆದರೆ ಈಗ ಲಭ್ಯವಿದ್ದ ನೀರಾವರಿ ಸೌಕರ್ಯವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳಲು ಆಗಿಲ್ಲ. ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ಶೇಕಡಾ ೨೦ರಷ್ಟು ನೀರಾವರಿ ಸೌಲಭ್ಯ ಉಪಯೋಗವಾಗದೆ ಉಳಿದಿತ್ತು. ಇದಕ್ಕೆ ಕಾರಣವೆಂದರೆ, ಹೊಲಗಳಲ್ಲಿ ಕಾಲುವೆಗಳಿಲ್ಲದ್ದು, ಮತ್ತು ರೈತರಿಗೆ ನೀರಾವರಿ ಬೇಸಾಯದ ಕಲ್ಪನೆ ಇಲ್ಲದಿರುವದು. ಹೆಚ್ಚಿನ ನೀರಾವರಿ ಚಾರ್ಜ ಸಹಿತ ಎಷ್ಟೋ ರೈತರನ್ನು ನೀರಾವರಿಯ ಸೌಲಭ್ಯದಿಂದ ದೂರವಿಟ್ಟಿದೆ.

ಬೇರೆ ಬೇರೆ ನೀರಾವರಿ ಯೋಜನೆಗಳಲ್ಲಿ ಚಿಕ್ಕ ನೀರಾವರಿ ಯೋಜನೆಗಳಾದ ಬಾವಿ ಮತ್ತು ಕೆರೆಗಳು ಮಹತ್ವದ ಪಾತ್ರ ವಹಿಸಿವೆ. ಇವುಗಳಿಗೆ ಬೇಕಾಗುವ ಬಂಡವಾಳ ಕಡಿಮೆ ಮತ್ತು ಅವುಗಳನ್ನು ಕಡಿಮೆ ವೇಳೆಯಲ್ಲಿ ಪೂರ್ತಿಗೊಳಿಸಬಹುದು. ಆದರೆ ಇವುಗಳ ದೊಡ್ಡ ಕೊರತೆಯೆಂದರೆ ಮಳೆಯು ಕಡಿಮೆ ಯಾದ ವರುಷಗಳಲ್ಲಿ ನೀರಾವರಿಯ ಉಪಯೋಗ ಹೆಚ್ಚಿಗೆ ಬೇಕಾದಾಗ, ಅವುಗಳು ಹೆಚ್ಚಿಗೆ ನೀರನ್ನು ಕೊಡಲಾರವು.

**( ೬ ) ಹಣದ ಕೊರತೆ :**

ಯಾವದೇ ಪ್ರಕಾರದ ಉದ್ದಿಮೆಗೆ ಸಾಲದ ನೆರವು ಅವಶ್ಯವಾಗಿರುವಂತೆ ಬೇಸಾಯಕ್ಕೂ ಅದು ಅಗತ್ಯವಾಗಿದೆ. ಬೇಸಾಯಕ್ಕೆ ಮೂರು ಪ್ರಕಾರದ ಸಾಲದ ಅವಶ್ಯಕತೆ ಇದೆ ಯೆಂದು ಹೇಳಬಹುದು:

### ಅಲ್ಪಾವಧಿ ಸಾಲ

ರೈತನಿಗೆ ಬೇಸಾಯದ ಸಾಗುವಳಿಯ ಸಲುವಾಗಿ ಹೊಲ ವನ್ನು ಹದಗೊಳಿಸುವ ಕಾರ್ಯದಿಂದ ಮೊದಲ್ಗೊಂಡು ಹುಟ್ಟುವಳಿ ಮಾರಾಟವಾಗುವ ವರೆಗಿನ ಎಲ್ಲ ಚಟುವಟಿಕೆ ಗಳಿಗೆ ಅಲ್ಪಾವಧಿ ಸಾಲದ ಅವಶ್ಯಕತೆ ಇದೆ. ಅಲ್ಪಾವಧಿ ಸಾಲದ ಅವಧಿಯು ಒಂದು ವರ್ಷಕ್ಕಿಂತ ಹೆಚ್ಚಿಗಿರುವದಿಲ್ಲ.

## ಮಧ್ಯಮಾವಧಿ ಸಾಲ

ಎರಡನೆಯದಾಗಿ ಸಾಗುವಳಿಯ ಉಪಕರಣಗಳು— ಎತ್ತು, ಚಕ್ಕಡಿಗಳ ಖರೀದಿ, ಒಡ್ಡು ಕಟ್ಟುವದು, ಬಾವಿ ತೋಡುವದು, ಪಂಪು ಸೆಟ್ಟುಗಳ ಖರೀದಿ, ದನಗಳ ಕೊಟ್ಟಿಗೆಯ ನಿರ್ಮಾಣ ಮುಂತಾದ ಉದ್ದೇಶಗಳಿಗೆ ಮಧ್ಯಮಾವಧಿ ಸಾಲದ ಅವಶ್ಯಕತೆ ಇದೆ. ಇದರ ಅವಧಿಯು ೧೫ ತಿಂಗಳಿಂದ ೫ ವರ್ಷಗಳ ವರೆಗಿರುತ್ತದೆ.

## ದೀರ್ಘಾವಧಿ ಸಾಲ

ಕೊನೆಯದಾಗಿ ಜಮೀನಿನಲ್ಲಿ ಶಾಶ್ವತ ಸುಧಾರಣೆ ಮಾಡಲು ಹಾಗೂ ಯಾಂತ್ರೀಕೃತ ಸಾಗುವಳಿ ಕೈಕೊಳ್ಳಲು ೫ ವರ್ಷದಿಂದ ೧೫-೨೦ ವರುಷಗಳ ಅವಧಿಯ ಸಾಲ ಬೇಕಾಗುತ್ತದೆ.

ನಮ್ಮ ದೇಶದಲ್ಲಿ ವಿವಿಧ ವ್ಯಕ್ತಿಗಳು ಹಾಗೂ ಸಂಸ್ಥೆಗಳು ಬೇಸಾಯದ ಸಾಲದ ಪೂರೈಕೆ ಮಾಡುತ್ತ ಬಂದಿದ್ದಾರೆ. ಭಾರತದ ರಿಜರ್ವ ಬ್ಯಾಂಕು ನೇಮಿಸಿದ್ದ ಅಖಿಲ ಭಾರತ ಗ್ರಾಮಾಂತರ ಸಾಲ ಪರಿಶೀಲನಾ ಸಮಿತಿಯ (All India Rural Credit Survey Committee ) ವರದಿಯ ಪ್ರಕಾರ ರೈತನ ಸಾಲದ ಮೂಲಗಳು ಕೆಳಗಿನಂತಿವೆ:

| ಸಾಲದ ಮೂಲ | ಸಾಲದ ಶೇಕಡಾ ಪ್ರಮಾಣ |
|---|---|
| ಸರಕಾರ | ೩.೩ |
| ಸಹಕಾರಿ ಸಂಘಗಳು | ೩.೧ |
| ಆಪ್ತೇಷ್ಟರು | ೧೪.೨ |
| ಜಮೀನದಾರರು | ೧.೫ |
| ವ್ಯವಸಾಯಗಾರ ಸಾಹುಕಾರರು | ೨೪.೯ |
| ಸಾಹುಕಾರರು | ೪೪.೮ |
| ವ್ಯಾಪಾರಸ್ಥರು ಹಾಗೂ ದಲಾಲರು | ೫.೫ |
| ವ್ಯಾಪಾರಿ ಬ್ಯಾಂಕುಗಳು | ೦.೯ |
| ಇತರರು | ೧.೮ |

## ಸಾಹುಕಾರರು

ನಮ್ಮ ರೈತ ಸಾಲಕ್ಕಾಗಿ ಸಾಹುಕಾರ ದಲ್ಲಾಳಿ ಮತ್ತಿತರರನ್ನು ಎಷ್ಟುಮಟ್ಟಿಗೆ ಅವಲಂಬಿಸಿದ್ದಾನೆನ್ನುವದು ಮೇಲಿನ ಅಂಕಿ ಸಂಖ್ಯೆಗಳಿಂದ ಸ್ಪಷ್ಟವಾಗುವದು. ಅವನು ಇಂದಿಗೂ ಆ ಸಾಲದ ಮೂಲಗಳನ್ನೇ ಬಹುಮಟ್ಟಿಗೆ ಅವಲಂಬಿಸಿದ್ದಾನೆ.

ಸಾಹುಕಾರಿ ವ್ಯವಹಾರವು ಭಾರತದ ಗ್ರಾಮಾಂತರ ಆರ್ಥಿಕ ವ್ಯವಸ್ಥೆಯಲ್ಲಿ ಅನೇಕ ಶತಮಾನಗಳಿಂದ ಅಸ್ತಿತ್ವ

ದಲ್ಲಿದ್ದ ಚಟುವಟಿಕೆಯಾಗಿದೆ. ಈ ವ್ಯವಹಾರದಲ್ಲಿ ಅನೇಕ ದೋಷಗಳಿವೆ. ಬರಿಯ ಕಾಗದದ ಮೇಲೆ ಸಾಲಗಾರರ ಸಹಿ ಪಡೆದು ಕೊಟ್ಟ ಹಣಕ್ಕಿಂತ ಹೆಚ್ಚು ಹಣ ಸೇರಿಸುವದು, ಮೊದಲೇ ಬಡ್ಡಿ ಮುರಿದುಕೊಳ್ಳುವದು, ಹೆಚ್ಚಿಗೆ ಬಡ್ಡಿ ತೆಗೆದು ಕೊಳ್ಳುವದು ಇತ್ಯಾದಿ. ಬಡ್ಡಿಯ ದರ ಹಾಗೂ ಸಾಹುಕಾರಿ ವ್ಯವಹಾರವನ್ನು ಕ್ರಮಗೊಳಿಸಲು ಬೇರೆ ಬೇರೆ ರಾಜ್ಯಗಳಲ್ಲಿ ಕೈಕೊಳ್ಳಲಾಗಿರುವ ಕಾಯಿದೆ ಕ್ರಮಗಳಿಂದ ಅಲ್ಪ ಮಟ್ಟಿಗೆ ಅಕ್ರಮ ವ್ಯವಹಾರಗಳು ಕಡಿಮೆಯಾಗಿವೆಯೆನ್ನಬಹುದು.

## ವ್ಯಾಪಾರಿ ಬ್ಯಾಂಕುಗಳು

ಬೇಸಾಯದ ಸಾಲದ ಪೂರೈಕೆಯಲ್ಲಿ ವ್ಯಾಪಾರಿ ಬ್ಯಾಂಕುಗಳ ಸಹಾಯವು ಅತಿ ಕಡಿಮೆ ಇದೆ. ಈ ಬ್ಯಾಂಕುಗಳು ಬೇಸಾಯದ ಸಾಲದಲ್ಲಿ ಕೇವಲ ಶೇಕಡಾ ೧ ರಷ್ಟು ಪೂರೈಸುತ್ತಿವೆ. ವ್ಯಾಪಾರಿ ಬ್ಯಾಂಕಿನ ವ್ಯವಹಾರದ ಸ್ವರೂಪವು ಬೇಸಾಯದ ಸಾಲದ ಬೇಡಿಕೆಯನ್ನು ಪೂರೈಸುವ ಸಾಹಸ ಮಾಡಲು ಪ್ರೋತ್ಸಾಹಕರವಿಲ್ಲ. ವ್ಯಾಪಾರಿ ಬ್ಯಾಂಕುಗಳು ಅಲ್ಪಾವಧಿ ಠೇವುಗಳನ್ನೆತ್ತುವದರಿಂದ ಅವು ಕೊಡುವ ಸಾಲಗಳಾದರೂ ಅಲ್ಪಾವಧಿಯವಾಗಿರಬೇಕಾಗುತ್ತದೆ. ಆದರೆ ಬೇಸಾಯದ ಸಾಲದ ಬೇಡಿಕೆಯು ಒಂದು ವರ್ಷದ ಮತ್ತು ಅದಕ್ಕೂ ಹೆಚ್ಚಿನ ಅವಧಿಯದಿರುವದರಿಂದ ವ್ಯಾಪಾರಿ ಬ್ಯಾಂಕಿನ ನಿಧಿ

ಗಳು ಉಪಯೋಗವಾಗಲಾರವು. ವ್ಯವಸಾಯಗಾರರು ಸಾಲಕ್ಕೆ ಭದ್ರತೆಯಾಗಿ ಕೊಡುವ ಜಮೀನು ಬೇಗ ಹಣಕ್ಕೆ ಪರಿವರ್ತನೆ ಹೊಂದಲಾರದವುಗಳಾದ್ದರಿಂದ ಅವು ಬ್ಯಾಂಕುಗಳಿಗೆ ಯೋಗ್ಯ ಭದ್ರತೆಯೆನಿಸುವದಿಲ್ಲ. ಮೇಲಾಗಿ ಗ್ರಾಮುಗಳಲ್ಲಿ ವಾಸಿಸುವ ಬೇಸಾಯುಗಾರನೊಂದಿಗೆ ಮೇಲಿಂದ ಮೇಲೆ ಸಂಪರ್ಕವಿಟ್ಟುಕೊಳ್ಳುವದು ಬ್ಯಾಂಕುಗಳಿಗೆ ಸಾಧ್ಯವಾಗುವದಿಲ್ಲ. ಈ ದಿಶೆಯಲ್ಲಿ ಸಿಂಡಿಕೇಟ ಬ್ಯಾಂಕು ಒಂದು ಯೋಜನೆಯನ್ನು ಕೈಕೊಂಡಿದ್ದು ಅದು ಎಷ್ಟರಮಟ್ಟಿಗೆ ಯಶಸ್ವಿಯಾಗುವದೆಂಬುದನ್ನು ನೋಡಬೇಕು.

## ಸರಕಾರದ ಸಾಲಗಳು

ಸರಕಾರವು ಬೇಸಾಯುಗಾರರಿಗೆ ಕೊಡುವ ಸಾಲಗಳು ರೂಢಿಯಲ್ಲಿ ತಗಾಯಿ ಸಾಲಗಳೆಂದು ಹೆಸರಾಗಿವೆ. ೧೮೮೩ ರ ಭೂ ಸುಧಾರಣಾ ಸಾಲಗಳ ಕಾಯಿದೆ ಮೇರೆಗೆ, ರೈತರಿಗೆ ಇಪ್ಪತ್ತು ವರುಷಗಳ ಅವಧಿಯ ದೀರ್ಘಾವಧಿ ಸಾಲಗಳನ್ನು ಕೊಡಲಾಗುವದು. ೧೮೮೪ರ ಬೇಸಾಯುಗಾರರ ಸಾಲಗಳ ಕಾಯಿದೆ ಪ್ರಕಾರ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ಕೊಡಲಾಗುವದು. ಅಲ್ಲದೆ ಬರಗಾಲದಿಂದ ಮತ್ತು ಮಹಾಪೂರದಿಂದ ಬೆಳೆಗಳು ಬಾರದ ಪ್ರಸಂಗಗಳಲ್ಲಿ ಪರಿಹಾರ ಕ್ರಮವೆಂದು ೧೮೮೪ರ ಕಾಯಿದೆ ಮೇರೆಗೆ ಆಪತ್ತಿನ ಸಾಲವನ್ನು ಒದಗಿಸಲಾಗುವದು. ಈ ಸಾಲಗಳನ್ನು ಪಡೆಯುವಾಗ

ರೈತನು ಅನೇಕ ತೊಂದರೆಗಳನ್ನೆದುರಿಸಬೇಕಾಗುತ್ತದೆ. ಬಡ್ಡಿಯು ದರ ಕಡಿಮೆ ಇದ್ದರೂ ಸಾಲ ದೊರಕಿಸುವ ವೆಚ್ಚ ಹೆಚ್ಚಾಗಿರುವದರಿಂದ ಈ ಸಾಲಗಳು ರೈತರಲ್ಲಿ ಅಷ್ಟೊಂದು ಜನಪ್ರಿಯವಾಗಿಲ್ಲ. ಮತ್ತು ಸಹಕಾರಿ ಸಂಘಗಳು ಯಾವ ಉದ್ದೇಶಕ್ಕಾಗಿ ಸಾಲ ಕೊಡುತ್ತವೆಯೋ: ಅದೇ ಉದ್ದೇಶಗಳಿಗಾಗಿ ಸರಕಾರವೂ ಸಹಿತ ಸಾಲ ಕೊಡುತ್ತದೆ. ಸಹಕಾರಿ ಸಂಘಗಳ ಸ್ಥಾಪನೆಯು ಪೂರ್ವದಲ್ಲಿ ಸರಕಾರವು ರೈತರಿಗೆ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲ ಕೊಡುವ ಅವಶ್ಯಕತೆ ಇತ್ತು. ಆದರೆ ಈಗ ಸಹಕಾರಿ ಸಂಘಗಳು ದೇಶದ ತುಂಬ ಸ್ಥಾಪಿಸಲ್ಪಟ್ಟಿರುವದರಿಂದ ಸರಕಾರವು ಈ ಸಾಲ ಕೊಡುವ ಅವಶ್ಯಕತೆ ಇಲ್ಲ. ೧೯೬೧ರಲ್ಲಿ ನೇಮಿಸಲ್ಪಟ್ಟಿದ್ದ "ತಗಾಯಿ ಸಾಲ ಮತ್ತು ಸಹಕಾರಿ ಪತ್ತಿನ ಸಮಿತಿಯು" ತನ್ನ ವರದಿಯಲ್ಲಿ ಸರಕಾರವು ತಗಾಯಿ ಸಾಲಗಳನ್ನು ನೇರವಾಗಿ ಬೇಸಾಯಗಾರರಿಗೆ ಕೊಡುವ ಪದ್ಧತಿಯನ್ನು ನಿಲ್ಲಿಸಬೇಕೆಂದೂ ಈ ಸಾಲಗಳನ್ನು ಸಹಕಾರಿ ಸಂಸ್ಥೆಗಳ ಮುಖಾಂತರ ಪೂರೈಸಬೇಕೆಂದೂ ಸೂಚಿಸಿದೆ. ಗಂಡಾಂತರ ಪ್ರಸಂಗಗಳಲ್ಲಿ ಬೇಸಾಯಗಾರರಿಗೆ ಸಹಾಯ ಮಾಡುವದು ತಗಾಯಿ ಸಾಲಗಳ ನಿಜವಾದ ಉದ್ದೇಶವಾಗಿದ್ದು ಇಂಥ ಸಾಲಗಳನ್ನು ಮಾತ್ರ ಸರಕಾರವೇ ಒದಗಿಸುತ್ತ ಹೋಗಬೇಕಾಗುವದು.

## ಚಿಟ್ ಫಂಡ ಹಾಗೂ ನಿಧಿಗಳು

ಮದ್ರಾಸ ಮತ್ತು ಕೇರಳ ರಾಜ್ಯಗಳಲ್ಲಿ ಕಾರ್ಯ ಮಾಡುವ ನಿಧಿಗಳು ಮತ್ತು ಚಿಟ್ ಫಂಡುಗಳು ವಿಶಿಷ್ಟ ಸ್ವರೂಪದ ಸಂಸ್ಥೆಗಳಾಗಿವೆ. ಈ ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ಹಣವನ್ನು ಸಂಗ್ರಹಿಸಿ ಅವಶ್ಯವಿದ್ದವರಿಗೆ ಸಾಲ ಕೊಡುತ್ತವೆ. ಈ ಪ್ರಕಾರದ ವ್ಯವಸ್ಥೆಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಮಿತವ್ಯಯ ಹಾಗೂ ಉಳಿತಾಯದ ಮನೋವೃತ್ತಿಯನ್ನು ಬೆಳೆಸಲು ಸಾಧ್ಯವಾಗುತ್ತದೆ.

## ಸಹಕಾರಿ ಸಂಘಗಳು

ಬೇಸಾಯದ ಸಾಲದ ವ್ಯವಸ್ಥೆಯಲ್ಲಿ ಸಹಕಾರಿ ಸಂಘಗಳು ಒಂದು ವಿಶಿಷ್ಟ ಸಾಧನ ಪಡೆದಿವೆ. ಸಹಕಾರಿ ಸಂಘಗಳಿಂದ ಸಿಗುವ ಸಾಲದ ಮೊತ್ತ ಇತ್ತೀಚಿಗೆ ಹೆಚ್ಚಿದೆ. ಸಹಕಾರಿ ರಂಗವು ಬೇಸಾಯಗಾರರ ಒಟ್ಟು ಬೇಡಿಕೆಯಲ್ಲಿ ಒದಗಿಸುತ್ತಿದ್ದ ಶೇಕಡಾ ೩ ರ ಪ್ರಮಾಣವು ಈಗ ೩೦ರ ವರೆಗೇರಿದೆ. ಇದರಲ್ಲಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ಪ್ರಾಥಮಿಕ ಸಾಲದ ಸಂಘಗಳು ಒದಗಿಸುತ್ತವೆ. ಮತ್ತು ದೀರ್ಘಾವಧಿ ಸಾಲಗಳನ್ನು ಪ್ರತ್ಯೇಕ ಸಂಸ್ಥೆಗಳಾದ "ಭೂ ಅಭಿವೃದ್ಧಿ ಬ್ಯಾಂಕುಗಳು" ಒದಗಿಸುತ್ತವೆ. ಆದರೆ ಸಹಕಾರಿ ಚಳುವಳಿಯು ಪ್ರಾರಂಭವಾಗಿ ೬೪ ವರುಷಗಳು

ಸಂದರೂ ಅದು ಇನ್ನೂ ವ್ಯವಸಾಯ ಸಾಲ ಹಾಗೂ ಗ್ರಾಮಾಂತರ ಸಾಲ ಸಮಸ್ಯೆಯನ್ನು ಬಿಡಿಸುವಲ್ಲಿ ಯಶಸ್ವಿಯಾಗಿಲ್ಲ. ಇದಕ್ಕೆ ಕಾರಣಗಳೆಂದರೆ ರೈತರು ಯಾವ ಉದ್ದೇಶಕ್ಕಾಗಿ ಸಾಲ ತೆಗೆದುಕೊಳ್ಳುತ್ತಾರೆಯೋ ಆ ಉದ್ದೇಶಕ್ಕಾಗಿ ಅದನ್ನು ಬಳಸುವದಿಲ್ಲ. ಸಾಲಗಳ ಮರುಪಾವತಿ ಸರಿಯಾಗಿ ನಡೆಯುವದಿಲ್ಲ. ಜನತೆಯಲ್ಲಿ ಸಹಕಾರಿ ಚಳುವಳಿಯ ಬಗ್ಗೆ ಆಸ್ಥೆ ಉಂಟಾಗಿಲ್ಲ.

ವ್ಯವಸಾಯ ಸಾಲದ ಕ್ಷೇತ್ರದಲ್ಲಿ ಭಾರತದ ರಿಜರ್ವ ಬ್ಯಾಂಕು ಮತ್ತು "ಸ್ಟೇಟ ಬ್ಯಾಂಕು"ಗಳ ಪಾತ್ರ ಬಹು ಮಹತ್ವದ್ದಾಗಿದೆ.

## ಬೇಸಾಯ ಸಾಲ ಪೂರೈಕೆಯಲ್ಲಿ ರಿಜರ್ವ ಬ್ಯಾಂಕಿನ ಪಾತ್ರ

ಬೇಸಾಯದ ಸಾಲಕ್ಕೆ ಸಂಬಂಧಿಸಿದ ಸಮಸ್ಯೆಗಳ ಅಭ್ಯಾಸಕ್ಕಾಗಿ ರಿಜರ್ವ ಬ್ಯಾಂಕಿನಲ್ಲಿ "ಬೇಸಾಯದ ಸಾಲದ ಇಲಾಖೆ" ಎಂಬ ಪ್ರತ್ಯೇಕ ಇಲಾಖೆ ಇರುತ್ತದೆ. ಈ ಇಲಾಖೆಯ ಮುಖ್ಯ ಕಾರ್ಯಗಳೆಂದರೆ—

(i) ಬೇಸಾಯದ ಸಾಲಕ್ಕೆ ಸಂಬಂಧಪಟ್ಟ ಎಲ್ಲ ಪ್ರಶ್ನೆಗಳನ್ನು ಅಭ್ಯಾಸ ಮಾಡಲು ತಜ್ಞ ಸಿಬ್ಬಂದಿಯನ್ನು ಇಟ್ಟುಕೊಳ್ಳುವದು ಮತ್ತು ಅಂಥ ಪ್ರಶ್ನೆಗಳ ಬಗ್ಗೆ

ಕೇಂದ್ರ ಸರಕಾರ, ರಾಜ್ಯ ಸರಕಾರ, ರಾಜ್ಯ ಸಹಕಾರಿ ಬ್ಯಾಂಕು ಮತ್ತು ಇತರ ಬ್ಯಾಂಕಿಂಗ ಸಂಸ್ಥೆಗಳೊಡನೆ ವಿಚಾರ ವಿನಿಮಯಕ್ಕೆ ತೊಡಗುವದು.

( ii ) ಬ್ಯಾಂಕಿನ ಬೇಸಾಯ ಸಾಲದ ಚಟುವಟಿಕೆಗಳು ಹಾಗೂ ಬೇಸಾಯ ಸಾಲ ಪೂರೈಸುವ ರಾಜ್ಯ ಸಹಕಾರಿ ಬ್ಯಾಂಕು ಮತ್ತಿತರ ಸಂಸ್ಥೆಗಳ ಕೂಡ ಬ್ಯಾಂಕಿಗೆ ಇರುವ ಸಂಬಂಧದ ನಡುವೆ ಸಮನ್ವಯ ಸಾಧಿಸುವದು.

ಈ ಇಲಾಖೆಯು ನಡೆಸುತ್ತಿರುವ ಸಂಶೋಧನೆಗಳು ಮತ್ತು ಸಮೀಕ್ಷೆಗಳು ಸಹಕಾರಿ ಚಳವಳಿಯ ಬೆಳೆವಣಿಗೆಗೆ ಹೆಚ್ಚು ಉಪಯುಕ್ತವಾಗಿವೆ. ಸಹಕಾರಿ ಧೋರಣೆಯನ್ನು ರೂಪಿಸುವದರಲ್ಲಿಯೂ ಶಾಸನಗಳ ನಿರ್ವಹಣದಲ್ಲಿಯೂ ಈ ಇಲಾಖೆಯಿಂದ ದೊರೆಯುವ ಸಲಹೆಗಳ ಪ್ರಯೋಜನವನ್ನು ಕೇಂದ್ರ ಸರಕಾರ ರಾಜ್ಯಸರಕಾರ ಮತ್ತು ಸಹಕಾರಿ ಹಣಕಾಸಿನ ಸಂಸ್ಥೆಗಳು ಹೆಚ್ಚಾಗಿ ಪಡೆದಿರುತ್ತವೆ.

## ಬೇಸಾಯ ಸಾಲ ಪೂರೈಕೆ

ಸಾಗುವಳಿಗೆ ಬೇಕಾಗುವ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ರಿಜರ್ವ ಬ್ಯಾಂಕು ಹೆಚ್ಚಿನ ಪ್ರಮಾಣದಲ್ಲಿ ಪೂರೈಸುತ್ತಿದೆ. ದೀರ್ಘಾವಧಿ ಪತ್ತಿನ ವಿಷಯದಲ್ಲಿ

ಮಾತ್ರ ಈ ಬ್ಯಾಂಕು ಅಪ್ರತ್ಯಕ್ಷವಾಗಿ ಸಹಾಯವನ್ನೊದಗಿಸುತ್ತದೆ. ಬೇಸಾಯದ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ರಾಜ್ಯ ಸಹಕಾರಿ ಬ್ಯಾಂಕಿನ ಮುಖಾಂತರ ಪೂರೈಸುತ್ತದೆ.

## ಅಲ್ಪಾವಧಿ ಸಾಲ

ರಿಜರ್ವ ಬ್ಯಾಂಕಿನ ಸಾಲದ ಸೌಲಭ್ಯ ಪಡೆಯಲಿಚ್ಛಿಸುವ ರಾಜ್ಯ ಸಹಕಾರಿ ಬ್ಯಾಂಕುಗಳು ತಮ್ಮ ನಿತ್ಯದ ಚಾಲ್ತಿ ಹೊಣೆಗಾರಿಕೆಯಲ್ಲಿ ಶೇಕಡಾ ೨೪ರಷ್ಟು ಮತ್ತು ಮುದ್ದತಿ ಹೊಣೆಗಾರಿಕೆಯಲ್ಲಿ ಶೇಕಡಾ ೧ರಷ್ಟರಂತೆ ರಿಜರ್ವ ಬ್ಯಾಂಕಿನಲ್ಲಿಡಬೇಕಾಗುತ್ತದೆ. ಉತ್ಪಾದನೆಯ ಚಟುವಟಿಕೆಗಳಿಗೆ ಬ್ಯಾಂಕು ಒಂದು ವರ್ಷದ ಅವಧಿಯ ಸಾಲಗಳನ್ನು ಪೂರೈಸುವದು. ಅಲ್ಪಾವಧಿ ಸಾಲ ಪೂರೈಸುವ ಪೂರ್ವದಲ್ಲಿ ರಿಜರ್ವ ಬ್ಯಾಂಕು ಪ್ರತಿಯೊಂದು ಜಿಲ್ಹಾ ಮಧ್ಯವರ್ತಿ ಬ್ಯಾಂಕಿನ ಬೇಡಿಕೆಯನ್ನು ಗಮನಿಸಿ ಅದರ ಆಡಿಟ್ ವರ್ಗೀಕರಣಕ್ಕನುಸಾರವಾಗಿ ಸಾಲವನ್ನು ಮಂಜೂರು ಮಾಡುವದು. "ಅ" ವರ್ಗದ ಮಧ್ಯವರ್ತಿ ಬ್ಯಾಂಕಿಗೆ ಅದರ ಸ್ವಂತ ಬಂಡವಾಳದ ನಾಲ್ಕು ಪಟ್ಟು, "ಬ" ವರ್ಗದ ಬ್ಯಾಂಕಿಗೆ ಮೂರು ಪಟ್ಟು ಮತ್ತು "ಕ" ವರ್ಗದ ಬ್ಯಾಂಕಿಗೆ—ರಜಿಸ್ಟ್ರಾರರ ವಿಶೇಷ ಶಿಫಾರಸು ಬಂದಲ್ಲಿ— ಎರಡು ಪಟ್ಟಿನವರೆಗೆ ಸಾಲ ಮಂಜೂರ ಮಾಡುತ್ತದೆ.

ಬೇಸಾಯದ ಸಾಲಗಳನ್ನು ಸುಲಭ ದರದಲ್ಲಿ ಪೂರೈಸಬೇಕೆಂಬ ತನ್ನ ಧೋರಣೆಗನುಗುಣವಾಗಿ ರಿಜರ್ವ ಬ್ಯಾಂಕು ಈ ಸಾಲಗಳಿಗೆ ತನ್ನ ಬಡ್ಡಿ ದರದಲ್ಲಿ ಶೇಕಡಾ ೨ರಷ್ಟು ರಿಯಾಯತಿ ಕೊಟ್ಟಿರುತ್ತದೆ.

**ಮಾಧ್ಯಮಿಕ ಸಾಲ:**

ಜಮೀನು ಸಾಗುವಳಿಗೊಳಪಡಿಸುವದು, ಒಡ್ಡು ಹಾಕುವದು, ಯಂತ್ರೋಪಕರಣಗಳ ಖರೀದಿ ಮೊದಲಾದ ಉದ್ದೇಶಗಳಿಗೆ ರಿಜರ್ವ ಬ್ಯಾಂಕು ಮಾಧ್ಯಮಿಕ ಸಾಲಗಳನ್ನು ಕೊಡುತ್ತದೆ. ಇತ್ತೀಚಿನ ವರೆಗೆ ಬ್ಯಾಂಕು ಎರಡು ವರುಷಗಳ ಅವಧಿಯ ಮಾಧ್ಯಮಿಕ ಸಾಲಗಳನ್ನು ಕೊಡುತ್ತಿತ್ತು. ಈಗ ರಾಜ್ಯ ಸಹಕಾರಿ ಬ್ಯಾಂಕಿಗೆ ಮಂಜೂರ ಮಾಡುವ ಒಟ್ಟು ಸಾಲದಲ್ಲಿ ಶೇಕಡಾ ೨೫ರಷ್ಟು ೫ ವರುಷಗಳ ವರೆಗೆ ಕೊಡಲಾರಂಭಿಸಿದೆ. ಸಾಲ ಬೇಡುವ ಮಧ್ಯವರ್ತಿ ಬ್ಯಾಂಕುಗಳು ಬರೆದು ಕೊಡುವ ಪ್ರಾಮಿಸರಿ ನೋಟು ಈ ಸಾಲಕ್ಕೆ ಭದ್ರತೆಯಾಗಿತ್ತಲ್ಲದೇ ಅಸಲು ಮತ್ತು ಬಡ್ಡಿ ಮುಟ್ಟಿಸುವ ಬಗ್ಗೆ ರಾಜ್ಯ ಸರಕಾರದ ಭರವಸೆಯನ್ನು ಬ್ಯಾಂಕು ತೆಗೆದುಕೊಳ್ಳುತ್ತದೆ.

ಇತ್ತೀಚೆಗೆ ಕೆಲವು ರಾಜ್ಯಗಳಲ್ಲಿ ಸಹಕಾರಿ ಸಕ್ಕರೆ ಕಾರಖಾನೆಗಳು ಹೆಚ್ಚು ಸಂಖ್ಯೆಯಲ್ಲಿ ಸ್ಥಾಪಿಸಲ್ಪಡುತ್ತಿರುವದರಿಂದ

ಈ ಕಾರಖಾನೆಗಳ ಶೇರು ಕೊಳ್ಳಲು ಸಣ್ಣ ಮತ್ತು ಮಧ್ಯಮ ಸಾಗುವಳಿದಾರರಿಗೆ ರಿಜರ್ವ ಬ್ಯಾಂಕು ಅಪೆಕ್ಸ ಬ್ಯಾಂಕಿನ ಮುಖಾಂತರ ಮಾಧ್ಯಮಿಕ ಸಾಲವನ್ನು ಪೂರೈಸ ಲಾರಂಭಿಸಿದೆ. ಇಂಥ ಸಾಲಗಳ ಅವಧಿ ನಾಲ್ಕು ವರುಷಗಳ ವರೆಗಿದೆ. ಈ ಸಾಲಗಳಿಗೂ ರಾಜ್ಯ ಸರಕಾರದ ಭರವಸೆ ಇರುತ್ತದೆ. ಹೀಗೆ ಶೇರು ಕೊಳ್ಳಲು ಕೊಟ್ಟ ಸಾಲಗಳಲ್ಲಿ ಮಾತ್ರ ಬಡ್ಡಿ ದರದಲ್ಲಿ ಯಾವನೇ ರಿಯಾಯತಿ ಇರುವದಿಲ್ಲ.

ಇದು ಅಲ್ಲದೆ ರಿಜರ್ವ ಬ್ಯಾಂಕು ಎರಡು ರಾಷ್ಟ್ರೀಯ ವ್ಯವಸಾಯ ಸಾಲ ನಿಧಿಗಳನ್ನು ಏರ್ಪಡಿಸಿದೆ. ಒಂದು ದೀರ್ಘಾ ವಧಿ ಕಾರ್ಯಾಚರಣೆಗಾಗಿ, ಮತ್ತೊಂದು ಭದ್ರತಾ ಉದ್ದೇಶ ಕ್ಕಾಗಿ.

## ರಾಷ್ಟ್ರೀಯ ಬೇಸಾಯ ಸಾಲದ (ದೀರ್ಘಾವಧಿ) ನಿಧಿ:

ರಿಜರ್ವ ಬ್ಯಾಂಕು ಈ ನಿಧಿಯನ್ನು ೧೯೫೬ರಲ್ಲಿ ಸ್ಥಾಪಿಸಿ ಪ್ರತಿವರುಷ ತನ್ನ ಲಾಭದಲ್ಲಿ ೫ ಕೋಟಿ ರೂಪಾಯಿ ಗಳಂತೆ ಮೊದಲಿನ ೫ ವರುಷಗಳ ವರೆಗೆ ಈ ನಿಧಿಯಲ್ಲಿ ಸೇರಿಸುತ್ತ ಬಂದಿದೆ. ಇತ್ತೀಚೆಗೆ ವರುಷಕ್ಕೆ ೧೦ ಕೋಟಿ ರೂಪಾಯಿಗಳನ್ನು ಸೇರಿಸತೊಡಗಿದೆ

ಈ ನಿಧಿಯನ್ನು ಕೆಳಗಿನ ಉದ್ದೇಶಗಳಿಗೆ ಉಪಯೋ ಗಿಸಲಾಗುವದು :

( i ) ಸಹಕಾರಿ ಸಾಲದ ಸಂಘಗಳ ಶೇರು ಖರೀದಿಗಾಗಿ

ರಾಜ್ಯ ಸರಕಾರಕ್ಕೆ ೨೦ ವರುಷಗಳೊಳಗಿನ ಅವಧಿಯ ವರೆಗೆ ಸಾಲ ಕೊಡುವದು.

( ii ) ಹದಿನೈದು ತಿಂಗಳಿಂದ ೫ ವರುಷಗಳ ವರೆಗೆ ಅಪೆಕ್ಸ ಬ್ಯಾಂಕುಗಳಿಗೆ ಮಾಧ್ಯಮಿಕ ಸಾಲ ಕೊಡುವದು.

( iii ) ಕೇಂದ್ರ ಜಮೀನು ಅಡಮಾನ ಬ್ಯಾಂಕುಗಳಿಗೆ ೨೦ ವರುಷದೊಳಗಿನ ಅವಧಿಯ ವರೆಗೆ ರಾಜ್ಯ ಸರಕಾರದ ಭರವಸೆಯ ಮೇಲೆ ದೀರ್ಘಾವಧಿ ಸಾಲ ಕೊಡುವದು.

( iv ) ಜಮೀನು ಅಡಮಾನ ಬ್ಯಾಂಕುಗಳು ಹೊರಡಿಸುವ ಸಾಲ ಪತ್ರಗಳನ್ನು ಅವುಗಳ ಅಸಲು ಹಾಗೂ ಬಡ್ಡಿಯನ್ನು ಮರಳಿ ಮುಟ್ಟಿಸುವ ಬಗ್ಗೆ ರಾಜ್ಯ ಸರಕಾರದ ಭರವಸೆ ಇದ್ದರೆ, ಕೊಳ್ಳುವದು.

**ರಾಷ್ಟ್ರೀಯ ಬೇಸಾಯ ಸಾಲದ (ಸ್ಥಿರೀಕರಣ) ನಿಧಿ :**

ರಿಜರ್ವ ಬ್ಯಾಂಕು ಈ ನಿಧಿಯನ್ನು ೧೯೫೬ರಲ್ಲಿ ಸ್ಥಾಪಿಸಿದೆ. ಯಾವದೊಂದು ವರ್ಷ ಅತಿವೃಷ್ಟಿ ಅನಾವೃಷ್ಟಿಯಿಂದ ಬೆಳೆ ಬಾರದೆ ರೈತರಿಗೆ ಕೊಟ್ಟ ಸಾಲವು ವಸೂಲಾಗದೆ ಇದ್ದಂತಹ ಪ್ರಸಂಗದಲ್ಲಿ ರಾಜ್ಯ ಸಹಕಾರಿ ಬ್ಯಾಂಕಿಗೆ ಆ ವರ್ಷದ ಸಾಲ ಮುಟ್ಟಿಸಲು ಅನುಕೂಲ ಮಾಡಿಕೊಡುವದೇ ಈ ನಿಧಿಯ ಉದ್ದೇಶವಾಗಿದೆ.

ಇದಲ್ಲದೆ ರಿಜರ್ವ ಬ್ಯಾಂಕು ಸಹಕಾರಿ ಬ್ಯಾಂಕುಗಳ ತಪಾಸಣೆ ಮಾಡುವದು. ಗ್ರಾಮಾಂತರ ಸಾಲದ ಬಗ್ಗೆ ಸಂಬಂಧಪಟ್ಟ ಮಾಹಿತಿಯನ್ನು ಸಂಗ್ರಹಿಸುವದು. ಅಂಕಿ ಸಂಖ್ಯೆಗಳನ್ನು ಪ್ರಕಟಿಪಡಿಸುವದು ಮುಂತಾದ ಕಾರ್ಯವನ್ನೂ ಮಾಡುತ್ತದೆ.

**ಬೇಸಾಯ ಸಾಲದಲ್ಲಿ ಸ್ಟೇಟ ಬ್ಯಾಂಕ ಆಫ್ ಇಂಡಿಯಾದ ಪಾತ್ರ :**

ಅಖಿಲ ಭಾರತ ಗ್ರಾಮಾಂತರ ಸಾಲ ಪರಿಶೀಲನಾ ಸಮಿತಿಯ ಸಿಫಾರಸಿನ ಮೇರೆಗೆ ಮೊದಲಿನ ಇಂಪೀರಿಯಲ್ ಬ್ಯಾಂಕು ೧೯೫೫ರಲ್ಲಿ ಸ್ಟೇಟ ಬ್ಯಾಂಕ ಆಫ್ ಇಂಡಿಯಾ ಎಂದು ಪುನರ್ಘಟಿಸಲ್ಪಟ್ಟಿತು. ಈ ಬ್ಯಾಂಕು ಜೇಸಾಯ ಸಾಲದ ಕ್ಷೇತ್ರದಲ್ಲಿ ಮಹತ್ವದ ಪಾತ್ರ ವಹಿಸಿದೆ. ಸಹಕಾರಿ ಬ್ಯಾಂಕಿಂಗ ವ್ಯವಹಾರವು ಬೆಳೆಯಬೇಕೆಂಬ ಉದ್ದೇಶದಿಂದ ಅಪೆಕ್ಸ ಬ್ಯಾಂಕು ಮತ್ತು ಮಧ್ಯವರ್ತಿ ಬ್ಯಾಂಕುಗಳಿಗೆ ವಿವಿಧ ಪ್ರಕಾರದ ಅಲ್ಪಾವಧಿ ಸಾಲಗಳನ್ನೊದಗಿಸುತ್ತದೆ. ಮಾರಾಟ ಹಾಗೂ ರೂಪಾಂತರ ಸಂಘಗಳಿಗೆ ಸ್ಟೇಟ ಬ್ಯಾಂಕ ಸಹಕಾರಿ ಸಕ್ಕರೆ ಕಾರಖಾನೆಗಳು ಯಂತ್ರ ಸಾಮುಗ್ರಿಗಳನ್ನು ಖರೀದಿ ಮಾಡಲಿಕ್ಕೂ ಇದು ಅನುಕೂಲ ಮಾಡಿ ಕೊಡುತ್ತದೆ. ಕೇಂದ್ರ ಹಾಗೂ ರಾಜ್ಯ ಉಗ್ರಾಣದ ಪಾವತಿಯ ಆಧಾರದ ಮೇಲೆ ಸಾಲ ಕೊಡುತ್ತದೆ.

## ಪೇಟೆಯ ಸೌಲಭ್ಯಗಳು

ರೈತನು ತನ್ನ ಸರಕುಗಳನ್ನು ಮಾರಾಟ ಮಾಡುವಾಗ ಮಾರಾಟದ ಸೌಲಭ್ಯಗಳು ಸಿಕ್ಕಲ್ಲಿ ರೈತನಿಗೆ ಹೆಚ್ಚಿಗೆ ಉತ್ಪಾದಿಸಲು ಹಾಗೂ ಹೆಚ್ಚಿಗೆ ಮಾರಾಟ ಮಾಡಲು ಪ್ರೋತ್ಸಾಹ ಸಿಕ್ಕಂತಾಗುತ್ತದೆ. ರೈತನು ಬೆಳೆಯನ್ನು ಪೇಟೆಗೆ ಸಾಗಿಸುವ ವೆಚ್ಚ ತಗ್ಗಬೇಕು. ತನ್ನ ಹುಟ್ಟುವಳಿಯನ್ನು ಸುಗ್ಗಿಯ ಕಾಲದಲ್ಲಿ ಇಳಿತರದ ಬೆಲೆಯಲ್ಲಿ ಮಾರಾಟ ಮಾಡುವದು ತಪ್ಪಬೇಕು. ರೈತ ಪೇಟೆಗೆ ತರುವ ಹುಟ್ಟುವಳಿಯನ್ನು ಏರಿಕೆ ಬೆಲೆ ಬರುವವರೆಗೆ ಶಾಸ್ತ್ರೀಯ ಮಳಿಗೆಗಳಲ್ಲಿ ಕಡಿಮೆ ವೆಚ್ಚದಲ್ಲಿ ಸಂಗ್ರಹಿಸಿಟ್ಟು ಆ ಹುಟ್ಟುವಳಿಯ ಆಧಾರದ ಮೇಲೆ ಅವನಿಗೆ ಮುಂಗಡ ಹಣ ದೊರೆಯುವಂತಾಗಬೇಕು. ದಲ್ಲಾಳಿ ವರ್ತಕರ ಬಳಿ ರೈತ ಹೋಗದೆ ಅವನ ಬೆಳೆಗೆ ಯೋಗ್ಯ ಬೆಲೆಯ ಭರವಸೆ ಬೇಕು. ಸಹಕಾರಿ ಮಾರಾಟ ಸಂಘವು ಈ ಬೇಡಿಕೆಗಳನ್ನು ಈಡೇರಿಸಬಲ್ಲದು ಸಹಕಾರಿ ಮಾರಾಟ ಸಂಘ ಪೇಟೆಯಲ್ಲಿ ಏರಿಕೆ ಬೆಲೆ ಬರುವ ವರೆಗೆ ರೈತನ ಬೆಳೆಯನ್ನು ಮಳಿಗೆಯಲ್ಲಿ ಸಂಗ್ರಹಿಸಿಟ್ಟು ಸಾಧ್ಯವಿದ್ದಲ್ಲಿ ಹುಟ್ಟುವಳಿಯ ವರ್ಗೀಕರಣ, ರೂಪಾಂತರ ಚಟುವಟಿಕೆ ಕೈಕೊಂಡು ರೈತನಿಗೆ ಯೋಗ್ಯ ಬೆಲೆ ತಂದು ಕೊಡಬಲ್ಲದು. ಈ ಬಗೆಯ ವ್ಯವಸ್ಥೆಯಿಂದ ವಿಶೇಷ ಪ್ರಯೋಜನವುಂಟು. ರೈತನಿಗೆ ಸಾಗಿಗೆ, ಸಂಗ್ರಹಣೆ,– ಕಡಿಮೆ ಬೆಲೆಗೆ ಮಾರಾಟದ ಚಿಂತೆ ಇಲ್ಲದಂತಾಗುವದು.

ರೈತನ ಚಿಂತೆ ಇಲ್ಲವಾಗುವದರ ಜೊತೆಗೆ ಅವನಿಗೆ ಸಾಲ ನೀಡಿದ ಸೇವಾ ಸಹಕಾರಿ ಸಂಘದ ಸಾಲ ವಸೂಲಿಯ ಚಿಂತೆಯೂ ಇಲ್ಲದಂತಾಗುವದು. ರೈತನಿಗೆ ಸಾಲ ಕೊಟ್ಟ ಸಹಕಾರಿ ಸಂಘದ ಮೂಲಕ ಅವನ ಬೆಳೆ ಸಹಕಾರಿ ಮಾರಾಟ ಸಂಘ ಸೇರಿದಲ್ಲಿ, ಆ ಬೆಳೆಯ ಮಾರಾಟದಿಂದ ಬಂದ ಹಣ ದಲ್ಲಿ ಸಹಕಾರಿ ಸಂಘ ಕೊಟ್ಟ ಸಾಲ ತಿರುಗಿ ಪಡೆಯಲು ಸುಲಭವಾಗುವದು. ಆದರೆ ಸೇವಾ ಸಹಕಾರಿ ಸಂಘದ ಸದಸ್ಯ ರೆಲ್ಲರೂ ತಮ್ಮ ಬೆಳೆಗಳನ್ನು ಮಾರಾಟ ಸಂಘದ ಮೂಲಕ ಮಾರಾಟ ಮಾಡಲು ಮುಂದಾಗದಿದ್ದುದೆ ಒಂದು ಸಮಸ್ಯೆ ಯಾಗಿದೆ. ಹೀಗಾಗಿ ಕೇಂದ್ರ, ರಾಜ್ಯ ಉಗ್ರಾಣ ನಿರ್ಮಾಣ ಸಂಸ್ಥೆಗಳು ಕೊಡಮಾಡಿದ ಮಳಿಗೆ ಸೌಲಭ್ಯಗಳನ್ನು ಹೆಚ್ಚಾಗಿ ಪಡೆಯಲು ರೈತರಿಗೆ, ಮಾರಾಟ ಸಂಘಗಳಿಗೆ ಸಾಧ್ಯವಾಗಿಲ್ಲ. ಉಗ್ರಾಣ ನಿರ್ಮಾಣ ಸಂಸ್ಥೆಗಳ ಮಳಿಗೆ ಗಳಲ್ಲಿ ಸಂಗ್ರಹಿಸಿಟ್ಟ ಹುಟ್ಟುವಳಿಯ ಅಂದಾಜು ಬೆಲೆಯಲ್ಲಿ ಶೇಕಡಾ ೭೫ರಷ್ಟು ಹಣವನ್ನು ಮಳಿಗೆಯ ಪಾವತಿಯ ಆಧಾರದ ಮೇಲೆ ಬ್ಯಾಂಕುಗಳಿಂದ ಮುಂಗಡವಾಗಿ ಪಡೆಯುವ ಸೌಲಭ್ಯವನ್ನು ಹೆಚ್ಚಾಗಿ ದಲ್ಲಾಳಿ ವರ್ತಕರೇ ಪಡೆಯುತ್ತಾರೆ. ವಿವಿಧ ಬಗೆಯ ಸೌಲಭ್ಯಗಳಿಗೆ ರೈತ ಎರವಾಗುವದರ ಜೊತೆಗೆ ಸಹಕಾರಿ ಸಾಲ ಮತ್ತು ಮಾರಾಟ ಜೋಡಣೆಯ ಕಾರ್ಯ ಕ್ರಮವೂ ಪರಿಣಾಮಕಾರಿಯಾಗುತ್ತಿಲ್ಲ.

ಸಹಕಾರಿ ಮಾರಾಟ ಸಂಘ ರೈತ ತರುವ ಬೆಳೆಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡುವ ಹೊಣೆ ಹೊತ್ತುದರ ಜೊತೆಗೆ ರೈತನಿಗೆ ಬೇಕಾದ, ಬೀಜ, ಗೊಬ್ಬರ, ವ್ಯವಸಾಯುದ ಉಪಕರಣಗಳನ್ನು, ನಿತ್ಯ ಬಳಕೆಯ ವಸ್ತುಗಳನ್ನು ಸೇವಾ ಸಹಕಾರಿ ಸಂಘದ ಮೂಲಕ ಒದಗಿಸಬಲ್ಲದು. ಹೀಗೆ ಸಹಕಾರಿ ಮಾರಾಟ ಸಂಘ ರೈತನ ಆರ್ಥಿಕ ಉನ್ನತಿಗೆ ಪ್ರಮುಖ ಸಾಧನವಾಗಬಲ್ಲದು.

## ೪ ಸಾಮಾಜಿಕ ಕಾರಣಗಳು

(೧) ರೈತನ ಕುರುಡು ನಂಬಿಕೆ:

ಕೆಲ ಅರ್ಥಶಾಸ್ತ್ರಜ್ಞರ ಮತ್ತು ಸಮಾಜಶಾಸ್ತ್ರಜ್ಞರ ಪ್ರಕಾರ ನಮ್ಮ ಬೇಸಾಯವು ಹಿಂದುಳಿಯಲು ನಮ್ಮ ರೈತರ ಕುರುಡು ನಂಬಿಕೆ ಹಾಗೂ ಅವರ ದೈವಾಧೀನ ಪ್ರವೃತ್ತಿಯೇ ಕಾರಣವೆಂದು ಹೇಳುತ್ತಾರೆ. ಪಾಶ್ಚಿಮಾತ್ಯ ಪಂಡಿತರಂತೂ ನಮ್ಮ ರೈತರ ವಿಚಾರಸರಣಿ ಬದಲಿಯಾಗದ ಹೊರತು ಅವರ ಆರ್ಥಿಕ ಪರಿಸ್ಥಿತಿಯಲ್ಲಿ ಬದಲಾವಣೆ ಸಾಧ್ಯವಿಲ್ಲವೆಂದು ಹೇಳುತ್ತಾರೆ. ನಮ್ಮ ರೈತರು ನಿರಕ್ಷರಿಗಳು ನಿಜ. ಆದರೆ ನಿರಕ್ಷರಿಗಳೆಂದ ಮಾತ್ರಕ್ಕೆ ಅವರಿಗೆ ವ್ಯವಹಾರ ಜ್ಞಾನವಿಲ್ಲವೆನ್ನುವದು ತಪ್ಪಾದೀತು. ಯಾವುದೇ ಮನುಷ್ಯನಿಗೆ ಉತ್ಪಾದನೆಯನ್ನು ಹೆಚ್ಚಿಸುವ ಮಾರ್ಗ ಗೊತ್ತಿದ್ದಾಗ ಉತ್ಪಾದನೆಯನ್ನು ಹೆಚ್ಚಿಸಲು ಪ್ರಯತ್ನ ಮಾಡುವದು ಸಹಜ. ಒಂದು ವೇಳೆ ನಮ್ಮ ರೈತರಿಗೆ ಬೇಸಾಯದ ಉತ್ಪಾದನೆಯನ್ನು ಹೆಚ್ಚಿಸುವ ಮಾರ್ಗ ಗೊತ್ತಿಲ್ಲದಿದ್ದರೆ ಅದನ್ನು ಅವರಿಗೆ ತಿಳಿಸಿಕೊಟ್ಟಲ್ಲಿ ಅವರು ಸುಮ್ಮನೆ ಕೂಡಲಾರರು.

**ಬೇಸಾಯದ ಸಂಘಟನೆ:**

ನಮ್ಮ ದೇಶದಲ್ಲಿ ಬೇಸಾಯವು ಜೀವನೋಪಾಯದ ಒಂದು ಮಾರ್ಗವಾಗಿದೆ. ಹೊಲದಲ್ಲಿ ಬೆಳೆದ ಬೆಳೆಯು ರೈತನ ಕುಟುಂಬದ ಜನರ ಉಪಜೀವನಕ್ಕೇ ವೆಚ್ಚವಾಗಿ ಹೋಗುತ್ತದೆ. ಹೀಗಾಗಿ ರೈತನ ಉತ್ಪನ್ನದಲ್ಲಿ ಉಳಿತಾಯವಾಗುವದಿಲ್ಲ. ಆದ್ದರಿಂದ ಕೆಲ ಅರ್ಥಶಾಸ್ತ್ರಜ್ಞರು ನಮ್ಮ ಬೇಸಾಯವನ್ನು ಬೇರೆ ಪದ್ಧತಿಯಂತೆ ಸಂಘಟನೆ ಮಾಡಬೇಕೆಂದು ಅಭಿಪ್ರಾಯ ಪಡುತ್ತಾರೆ.

ಸ್ವಾತಂತ್ರ್ಯದ ನಂತರ ನಮ್ಮ ದೇಶದಲ್ಲಿ ಎಲ್ಲ ರಾಜ್ಯ ಸರಕಾರಗಳೂ ಜಮೀನುದಾರಿ ಪದ್ಧತಿಯನ್ನು ನಿರ್ಮೂಲ ಗೊಳಿಸಲು ಭೂಸುಧಾರಣಾ ಕಾಯ್ದೆಗಳನ್ನು ಜಾರಿಯಲ್ಲಿ ತಂದಿವೆ. ಜಮೀನುದಾರಿ ಪದ್ಧತಿಯ ನಿರ್ಮೂಲನೆಯ ನಂತರ ನಮ್ಮ ದೇಶದ ಬೇಸಾಯವನ್ನು ಹೇಗೆ ಸಂಘಟಿಸಬೇಕೆಂಬುದು ಒಂದು ದೊಡ್ಡ ಸಮಸ್ಯೆಯಾಗಿದೆ. ನಮ್ಮ ಬೇಸಾಯವನ್ನು ಹೇಗೆ ಸಂಘಟಿಸಬೇಕೆಂಬ ವಿಚಾರದಲ್ಲಿ ನಮಗೀಗ ಮೂರು ತರದ ಅವಕಾಶಗಳಿವೆಯೆನ್ನಬಹುದು.

**ಬಂಡವಳಶಾಹಿ ಬೇಸಾಯ :**

**(Capitalist or Estate Farming)**

ಮೊದಲನೆಯದಾಗಿ ಭೂಮಿಯನ್ನು ದೊಡ್ಡ ಹಿಡುವಳಿ ಗಳನ್ನಾಗಿ ಸಂಘಟಿಸಿ ಆಳುಗಳ ಸಹಾಯದಿಂದ ಬೇಸಾಯ

ಮಾಡುವದು. ಹೀಗೆ ದೊಡ್ಡ ಪ್ರಮಾಣದ ಬೇಸಾಯದಲ್ಲಿ ಯಂತ್ರೋಪಕರಣಗಳಿಂದ ನಾವು ಭೂಮಿಯ ಉತ್ಪನ್ನವನ್ನು ಹೆಚ್ಚಿಸಬಹುದು. ಈ ಪದ್ಧತಿಯ ಬೇಸಾಯವು, ಭೂಮಿ ಹೆಚ್ಚಿಗಿದ್ದ ಬೇಸಾಯವನ್ನವಲಂಬಿಸಿ ಜೀವಿಸುವ ಜನರು ಕಡಿಮೆ ಇದ್ದ ದೇಶಗಳಲ್ಲಿ ಸಾಧ್ಯವಿದೆ. ಜನಸಂಖ್ಯೆ ಹೆಚ್ಚಿಗಿದ್ದ ಹಿಂದುಸ್ಥಾನದಂತಹ ದೇಶಗಳಲ್ಲಿ ಈ ತರದ ಬೇಸಾಯದಿಂದ ಬೇಸಾಯಗಾರರಲ್ಲಿ ನಿರುದ್ಯೋಗತನವು ಹೆಚ್ಚುತ್ತದೆ. ಆದ್ದರಿಂದ ಬಂಡವಳಶಾಹಿ ಬೇಸಾಯವನ್ನು ಅನುಸರಿಸಲು ನಮ್ಮ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಗಳು ಅನುಕೂಲವಿಲ್ಲ.

**ರೈತ ಬೇಸಾಯ ಪದ್ಧತಿ: (Peasant Farming)**

ಎರಡನೆಯದಾಗಿ ನಾವು ಬೇಸಾಯವನ್ನು ರೈತ ಬೇಸಾಯ ಪದ್ಧತಿಯಂತೆ ಸಂಘಟಿಸಬಹುದು. ಇದರ ಪ್ರಕಾರ ಸಣ್ಣ-ಪುಟ್ಟ ರೈತರು ತಮ್ಮ ಸ್ವಂತ ಜಮೀನಿನಲ್ಲಿ ತಾವೇ ಸ್ವತಃ ದುಡಿಯುವರು. ಇದರ ಪ್ರಕಾರ ಭೂಮಿಯ ಹಿಡುವಳಿಯ ಗಾತ್ರ ಚಿಕ್ಕದಾಗುವದು.

**ಸಹಕಾರಿ ಬೇಸಾಯ:**

ಕೊನೆಯದಾಗಿ ನಾವು ಸಹಕಾರಿ ಬೇಸಾಯವನ್ನು ಸಂಘಟಿಸಬಹುದು. ಈ ಪದ್ಧತಿಯಂತೆ ಸಣ್ಣ-ದೊಡ್ಡ ರೈತರು

ತಮ್ಮ ಭೂಮಿಯನ್ನು ಒಂದುಗೂಡಿಸಿ ಬೇಸಾಯ ಮಾಡು ವದು. ಬೇಸಾಯದಿಂದ ಬಂದ ಉತ್ಪನ್ನವನ್ನು ತಮ್ಮಲ್ಲಿ ಹಂಚಿಕೊಳ್ಳುವದು. ಈ ಪದ್ಧತಿಯ ಪ್ರಕಾರ ಭೂಮಿಯ ಹಿಡುವಳಿಯ ಗಾತ್ರ ದೊಡ್ಡದಾಗುವದು.

ಅನೇಕ ಅರ್ಥಶಾಸ್ತ್ರಜ್ಞರು ಹಿಂದುಸ್ಥಾನದಂತೆ ಜನ ಸಂಖ್ಯೆ ಹೆಚ್ಚಿಗಿರುವ ಅಭಿವೃದ್ದಿ ಹೊಂದುತ್ತಿರುವ ರಾಷ್ಟ್ರ ಗಳಿಗೆ ರೈತ ಬೇಸಾಯವೇ ಯೋಗ್ಯವಾದದ್ದೆಂದು ಅಭಿಪ್ರಾಯ ಪಡುತ್ತಾರೆ. ರೈತ ಬೇಸಾಯದ ಎರಡು ಬಹು ಮುಖ್ಯ ಲಕ್ಷಣಗಳೆಂದರೆ—ರೈತ ಬೇಸಾಯದಲ್ಲಿ ವ್ಯವಸ್ಥಾಪಕ ಹೊಣೆ ರೈತನ ಮೇಲೆಯೇ ಇರುತ್ತದೆ. ಅವನೇ ಭೂಮಿಯ ಮಾಲಕ ನಿರುವದರಿಂದ ಬೇಸಾಯದ ಜವಾಬ್ದಾರಿಯನ್ನು ಅವನೇ ಹೊರುತ್ತಾನೆ. ಮತ್ತು ಬೇಸಾಯಕ್ಕೆ ಬೇಕಾಗುವ ಶ್ರಮ ವನ್ನು ರೈತ ತನ್ನ ಮನೆಯಿಂದಲೇ ಒದಗಿಸುತ್ತಾನೆ. ಅವ ಶ್ಯಕತೆ ಬಿದ್ದಾಗ ಅವನು ಬೇರೆ ಕೂಲಿಕಾರರ ಸಹಾಯ ತೆಗೆದುಕೊಳ್ಳಬಹುದು. ಆದರೆ ಪ್ರತಿನಿತ್ಯದ ಕೆಲಸವನ್ನು ರೈತನ ಮನೆಯವರೇ ಮಾಡುತ್ತಾರೆ.

ರೈತ ಬೇಸಾಯ ಪದ್ಧತಿಯಿಂದ ಕೆಲವೊಂದು ಲಾಭ ಗಳಿವೆಯೆಂದು ಅದರ ಪ್ರತಿಪಾದಕರು ವಾದಿಸುತ್ತಾರೆ.

**( i ) ನಿರುದ್ಯೋಗತನವನ್ನು ಹೋಗಲಾಡಿಸುವದು :**

ಜನಸಂಖ್ಯೆ ಹೆಚ್ಚಿಗಿರುವ ಹಿಂದುಸ್ಥಾನದಂತಹ

ದೇಶಗಳಲ್ಲಿ ರೈತ ಬೇಸಾಯವು ಜನರಿಗೆ ಉದ್ಯೋಗವನ್ನು ಕಲ್ಪಿಸಿ ಕೊಡುತ್ತದೆ. ಇಂಥ ರಾಷ್ಟ್ರಗಳಲ್ಲಿ ಔದ್ಯೋಗಿಕ ಪ್ರಗತಿ ಸಾಕಷ್ಟು ಇರುವದಿಲ್ಲವಾದ್ದರಿಂದ ಹೆಚ್ಚಿಗೆ ಜನರು ಬೇಸಾಯವನ್ನವಲಂಬಿಸಿ ಜೀವಿಸಬೇಕಾಗುತ್ತದೆ. ರೈತ ಬೇಸಾಯವು ಹೆಚ್ಚಿಗೆ ಜನರು ಬೇಸಾಯದಲ್ಲಿ ದುಡಿಯಲು ಅವಕಾಶ ಮಾಡಿಕೊಡುತ್ತದೆ.

**(ii) ಉತ್ಪತ್ತಿ ಹೆಚ್ಚಿಸುವದು:**

ರೈತ ಬೇಸಾಯದಲ್ಲಿ ರೈತನು ತನ್ನ ಮನೆಯ ಜನರನ್ನೊಳಗೊಂಡು ತನ್ನ ಭೂಮಿಯಲ್ಲಿ ದುಡಿಯುವದರಿಂದ ಮನಸ್ಸುಗೊಟ್ಟು ಕೆಲಸ ಮಾಡುತ್ತಾನೆ. ತನ್ನ ದುಡಿಮೆಯ ಪ್ರತಿಫಲವನ್ನು ತಾನೇ ಉಪಭೋಗಿಸುವದರಿಂದ ಹೆಚ್ಚಿಗೆ ದುಡಿಯಲು ಅವನಲ್ಲಿ ಹುಮ್ಮಸ್ಸು ಬರುತ್ತದೆ. ಈ ರೀತಿಯಾಗಿ ಸಣ್ಣ ಹಿಡುವಳಿಗಳಲ್ಲಿ ಉತ್ಪನ್ನವು ಹೆಚ್ಚು ಬರುವದೆಂಬುದಕ್ಕೆ ಡೆನ್ಮಾರ್ಕ ಹಾಗೂ ಜಪಾನ ದೇಶಗಳು ನಿದರ್ಶಗಳಾಗಿವೆ.

**(iii) ಸಾಮಾಜಿಕ ಭದ್ರತೆ :**

ರೈತ ಬೇಸಾಯ ಪದ್ಧತಿಯಲ್ಲಿ ರೈತನು ಭೂಮಿಯ

ರೂಪದಲ್ಲಿ ಕೆಲವೊಂದು ಆಸ್ತಿಯನ್ನು ಹೊಂದಿರು ವದರಿಂದ ಅವನು ತೀವ್ರಗಾಮಿಗಳ ಪಕ್ಷಕ್ಕೆ ಒಲಿಯುವದಿಲ್ಲ. ಈ ರೀತಿಯಾಗಿ ಸಮಾಜದಲ್ಲಿ ಭದ್ರತೆ ಉಂಟಾಗುತ್ತದೆ.

ರೈತ ಬೇಸಾಯದ ವಿರೋಧಿಗಳು ರೈತ ಬೇಸಾಯ ಪದ್ಧತಿಯು ಜನಸಂಖ್ಯೆಯನ್ನು ಹೆಚ್ಚಿಸುವದೆಂದು ಹೇಳುತ್ತಾರೆ. ರೈತ ಬೇಸಾಯ ಪದ್ಧತಿಯಲ್ಲಿ ಭೂಮಿಯಲ್ಲಿ ರೈತನ ಮನೆಯ ಜನರೇ ದುಡಿಯುವದರಿಂದ ಮನೆಯಲ್ಲಿ ಹೆಚ್ಚಿಗೆ ಜನರಿದ್ದಷ್ಟು ರೈತನಿಗೆ ಅನುಕೂಲವಾಗುತ್ತದೆ. ಈ ದೃಷ್ಟಿಯಿಂದ ರೈತನು ಬೇಗ ಮದುವೆಯಾಗಿ ಜನಸಂಖ್ಯೆಯಲ್ಲಿ ಹೆಚ್ಚಳವಾಗುವದೆಂದು ಅವರ ಅಭಿಪ್ರಾಯ. ಆದರೆ ಸರಕಾರವು ಕುಟುಂಬ ಯೋಜನೆಯ ಪ್ರಚಾರ ಕೈಕೊಂಡಲ್ಲಿ ಮತ್ತು ಗ್ರಾಮಾಂತರ ಜನರಿಗೆ ಕುಟುಂಬ ಯೋಜನೆಯ ಸೌಕರ್ಯ ಒದಗಿಸಿಕೊಟ್ಟಲ್ಲಿ ರೈತ ಬೇಸಾಯದಿಂದ ಜನಸಂಖ್ಯೆ ಹೆಚ್ಚುವ ಭಯವಿಲ್ಲವೆನ್ನಬಹುದು.

ರೈತ ಬೇಸಾಯವು ಭೂಮಿಯನ್ನು ತುಂಡುಗಳನ್ನಾಗಿ ಮಾಡುತ್ತದೆಯೆಂದು ಕೆಲವರ ವಾದ. ರೈತನ ಮಕ್ಕಳು ಸರಿಯಾಗಿ ಭೂಮಿಯಲ್ಲಿ ಪಾಲುಗಾರರಾಗುವದರಿಂದ ಹಿಡುವಳಿಯ ಗಾತ್ರವು ಚಿಕ್ಕದಾಗುವದಲ್ಲದೇ ತುಂಡು ಭೂಮಿಗಳು ಸಹಿತ ಹೆಚ್ಚಾಗುತ್ತ ಹೋಗುತ್ತವೆ. ಆದರೆ ಈಗ ಸರ್ವ

ಸಾಧಾರಣವಾಗಿ ಎಲ್ಲ ರಾಜ್ಯಗಳು ಭೂಮಿಯನ್ನು ಕೆಲವೊಂದು ನಿರ್ದಿಷ್ಟ ಪ್ರಮಾಣಕ್ಕಿಂತಲೂ ಚಿಕ್ಕವುಗಳನ್ನಾಗಿ ಮಾಡಲು ಪ್ರತಿಬಂಧಕ ಕಾಯದೆ ಮಾಡಿರುವದರಿಂದ ಇದರ ಭಯವಿಲ್ಲವೆನ್ನಬಹುದು. ಇಂಥ ಪರಿಸ್ಥಿತಿಯಲ್ಲಿ ಭೂಮಿಯ ಏಕೀಕರಣವೂ ಸಹಿತ ಸಹಾಯಕವಾಗುವದು.

ನಾವು ಈಗ ಸದ್ಯ ಬೇಸಾಯವನ್ನವಲಂಬಿಸಿದ ಜನರಿಗೆಲ್ಲರಿಗೂ ಭೂಮಿಯನ್ನು ಕೊಡಬೇಕಾದಲ್ಲಿ ರೈತನ ಹಿಡುವಳಿಯ ಗಾತ್ರ ಬಹಳ ಚಿಕ್ಕದಾಗಿ ಅದರಿಂದ ಬರುವ ಉತ್ಪನ್ನವು ಅವನ ಕುಟುಂಬಕ್ಕೆ ಸಾಲದಂತಾಗುತ್ತದೆಯೆಂದು ರೈತ ಬೇಸಾಯದ ವಿರೋಧಿಗಳು ಪ್ರತಿಪಾದಿಸುತ್ತಾರೆ. ಆದ್ದರಿಂದ ನಾವು ಈಗ ಸಣ್ಣ-ಪುಟ್ಟ ರೈತರನ್ನು ಒಂದುಗೂಡಿಸಿ ಸಹಕಾರಿ ಬೇಸಾಯವನ್ನು ಪ್ರಚಾರಕ್ಕೆ ತರಬೇಕೆಂದು ಕೆಲವರ ಅಭಿಪ್ರಾಯ. ಹೀಗೆ ಸಹಕಾರಿ ಬೇಸಾಯ ಪ್ರಾರಂಭವಾದಲ್ಲಿ ಬೇಸಾಯದಲ್ಲಿ ಸುಧಾರಣೆ ಮಾಡುವದು ಸುಲಭವಾಗುವದು.

ಸಹಕಾರಿ ಬೇಸಾಯ ಪದ್ಧತಿ ನಮ್ಮ ದೇಶಕ್ಕೆ ಇಂದು ಎಂದಿಲ್ಲದಷ್ಟು ಅಗತ್ಯವಾಗಿದೆ. ನಿರ್ಬಲ ವರ್ಗದ ರೈತರಿಗೆ ಇದೊಂದು ಪರಿಣಾಮಕಾರಿ ಸಾಧನ. ಸಹಕಾರಿ ಬೇಸಾಯದಿಂದ ಬೇಸಾಯದ ಉತ್ಪಾದನೆ ಹೆಚ್ಚಿಸಲು ಬರುವದು. ಸಣ್ಣ-ಪುಟ್ಟ ರೈತರಿಗೆ ಸುಧಾರಿಸಿದ ಉಪಕರಣಗಳನ್ನು ಕೊಳ್ಳುವದಾಗಲಿ ಅಥವಾ ನೀರಾವರಿಯ ಸೌಲಭ್ಯ ಪಡೆಯುವದಾಗಲಿ

ತನ್ನೊಬ್ಬರಿಂದಲೇ ಸಾಧ್ಯವಿಲ್ಲ. ರೈತ ತನ್ನೊಬ್ಬನಿಂದಾಗದು ದನ್ನು ಸಹಕಾರಿ ಬೇಸಾಯ ಸಂಘದಿಂದ ಸಾಧಿಸಬಲ್ಲ. ಅಧಿಕ ಉತ್ಪಾದನೆ ಸಾಧಿಸಿ, ತನ್ನ ಆರ್ಥಿಕ ಸ್ಥಿತಿ ಸುಧಾರಿಸಿಕೊಳ್ಳು ವದರ ಜೊತೆಗೆ ಅವನಿಗೆ ಇನ್ನೂ ಒಂದು ಪ್ರಯೋಜನವುಂಟು.

ಹನ್ನೆರಡು ತಿಂಗಳು ರೈತನಿಗೆ ಹೊಲಗೆಲಸವಿರುವದಿಲ್ಲ, ವರುಷದ ಕೆಲ ದಿನಗಳನ್ನು ಅವನು ಕೆಲಸವಿಲ್ಲದೇ ಕಳೆಯು ವದುಂಟು. ಇಂಥ ಸಮಯದಲ್ಲಿ ಅವನಿಗೆ ಸಹಕಾರಿ ಬೇಸಾಯ ಸಂಘ ಹೈನದ ಉದ್ಯಮ, ಕೋಳಿ ಸಾಕಣೆ, ಗುಡಿಕೈಗಾರಿಕೆ ಮತ್ತು ಇನ್ನಿತರ ಪೂರಕ ಉದ್ಯಮಗಳನ್ನು ಕೈಕೊಳ್ಳಲು ಸಹಾಯವಾಗುತ್ತದೆ. ಇದರಿಂದ ರೈತನ ಉದ್ಧಾರಕ್ಕೆ ಸಹಕಾರ ಬಹು ಮುಖ್ಯ ಸಾಧನವಾಗಿದೆ.

**( ೩ ) ಸರಕಾರದ ಆರ್ಥಿಕ ನೀತಿ:**

ಪಾಶ್ಚಿಮಾತ್ಯ ಅರ್ಥಶಾಸ್ತ್ರಜ್ಞರಾದ ಥಿಯೊಡೊರ ಸೂಲ್ಜ (Theodore Schultz) ಮತ್ತು ಎಡ್ವರ್ಡ ಮಸಾನ್ನರು (Edward Mason) ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ ಗಳಲ್ಲಿ ಬೇಸಾಯವು ಹಿಂದುಳಿಯಲು, ಆಯಾ ರಾಷ್ಟ್ರಗಳ ಸರಕಾರಗಳ ಆರ್ಥಿಕ ನೀತಿಗಳೇ ಕಾರಣವೆಂದು ಹೇಳುತ್ತಾರೆ. ಹಿಂದುಸ್ಥಾನದಂತಹ ಹಿಂದುಳಿದ ರಾಷ್ಟ್ರಗಳು ಔದ್ಯೋಗಿಕ ರಣಕ್ಕೆ ಹೆಚ್ಚಿಗೆ ಮಹತ್ವ ಕೊಟ್ಟು ಬೇಸಾಯದ ಅಭಿವೃದ್ಧಿ

ಯನ್ನು ಕಡೆಗಣಿಸಿದ್ದರಿಂದ ಹಿಂದುಸ್ಥಾನವು ಈಗ ಆಹಾರ ಸಮಸ್ಯೆಯನ್ನು ಎದುರಿಸಬೇಕಾಗಿದೆಯೆಂದು ಅವರ ಅಭಿಪ್ರಾಯ. ಹಿಂದುಸ್ಥಾನವು ಬೇಸಾಯದ ಅಭಿವೃದ್ಧಿಯನ್ನು ಕಡೆಗಣಿಸಲು ಅಮೇರಿಕೆಯ ಪಿ. ಎಲ್. ೪೮೦ ಆಹಾರ ಧಾನ್ಯಗಳ ಆಮದುಗಳೂ ಸಹಾಯ ಮಾಡಿವೆಯೆಂದು ಅವರು ಹೇಳುತ್ತಾರೆ. ಕಡಿಮೆ ಬೆಲೆಯಿಂದ ಮತ್ತು ಉದ್ರಿಯಿಂದ ಸಿಕ್ಕ ಈ ಆಹಾರ ಧಾನ್ಯಗಳನ್ನು ಸರಕಾರವು ದೊಡ್ಡ ಪ್ರಮಾಣದಲ್ಲಿ ತಂದು ಜನರಿಗೆ ಹಂಚುವದರಿಂದ ಹಿಂದುಸ್ಥಾನದ ಬೇಸಾಯಗಾರರ ಹುಟ್ಟುವಳಿಗೆ ಒಳ್ಳೆಯ ಬೆಲೆಯು ಸಿಗದೇ ಹೋಗಿದ್ದರಿಂದ ಅವರು ತಮ್ಮ ಬೇಸಾಯದಲ್ಲಿ ಸುಧಾರಣೆ ಮಾಡಿಕೊಳ್ಳಲಾಗಲಿಲ್ಲವೆಂದು ಅವರ ಅಭಿಪ್ರಾಯ. ಇದರ ಜೊತೆಗೆ ಹಿಂದುಸ್ಥಾನದಲ್ಲಿ ರಾಸಾಯನಿಕ ಗೊಬ್ಬರಗಳ ಬೆಲೆಗಳು ಕಡಿಮೆಯಿದ್ದಾಗ ಅವುಗಳನ್ನು ದೊಡ್ಡ ಪ್ರಮಾಣದಲ್ಲಿ ಉಪಯೋಗಿಸುವದು ಲಾಭಕರವಾಗಿ ಕಂಡು ಬರುವದಿಲ್ಲವಾದ್ದರಿಂದ ಉತ್ಪಾದನೆಯು ಕಡಿಮೆಯಾಗುವದು ಸಹಜವೆಂದು ಅವರ ಅಭಿಪ್ರಾಯ. ಹಿಂದುಸ್ಥಾನದ ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಪ್ರೊಫೆಸರ್ ದಾಂಡೇಕರರೂ ಸಹಿತ ಅಮೇರಿಕೆಯ ಆಹಾರ ಧಾನ್ಯಗಳ ಸಹಾಯವು ಹಿಂದುಸ್ಥಾನಕ್ಕೆ ಸಹಾಯದ ಬದಲು ಅಪಾಯವನ್ನೇ ಹೆಚ್ಚಾಗಿ ಮಾಡಿದೆಯೆಂದು ಅಭಿಪ್ರಾಯ ಪಡುತ್ತಾರೆ.

ಹಿಂದುಸ್ಥಾನದ ಇನ್ನೊಬ್ಬ ಪ್ರಸಿದ್ಧ ಅರ್ಥಶಾಸ್ತ್ರಜ್ಞ

ರಾದ ದಾಂತವಾಲರು ಇದನ್ನು ಒಪ್ಪುವದಿಲ್ಲ. ಹಿಂದುಸ್ಥಾನ ದಲ್ಲಿ ಬೇಸಾಯದ ಹುಟ್ಟುವಳಿಗಳ ಬೆಲೆಗಳನ್ನು ಅಮೇರಿಕೆಯ ಆಹಾರ ಧಾನ್ಯಗಳ ಆಮದುಗಳು ಹತ್ತಿಕ್ಕಿಲ್ಲವೆಂದು ಅವರು ಹೇಳುತ್ತಾರೆ. ಹಿಂದುಸ್ಥಾನದಲ್ಲಿ ಬೇಸಾಯದ ಹುಟ್ಟುವಳಿಗಳ ಬೆಲೆಗಳು ಏರುತ್ತ ನಡೆದಿವೆಯೆಂದು ಅವರ ಅಭಿಪ್ರಾಯ. ೧೯೫೨ರಲ್ಲಿ ಬೇಸಾಯದ ಹುಟ್ಟುವಳಿಗಳ ಬೆಲೆಗಳು ೧೯೩೯ ರಕ್ಕಿಂತ ೪ತ್ತಿ ಪಟ್ಟು ಹೆಚ್ಚಿಗಿದ್ದವು. ಮತ್ತು ೧೯೬೫ರಲ್ಲಿಯ ಬೆಲೆಗಳು ೧೯೫೨ರ ಬೆಲೆಗಳ ದುಪ್ಪಟ್ಟನಕ್ಕಿಂತ ಹೆಚ್ಚಿಗಿದ್ದವು. ಆದ್ದರಿಂದ ಈಗಿನ ಬೇಸಾಯದ ಹುಟ್ಟುವಳಿಗಳ ಬೆಲೆಗಳು ಯುದ್ಧಪೂರ್ವದ ವರುಷದ ಬೆಲೆಗಳ ೯ ಪಟ್ಟು ಇದ್ದಂತಾಯಿತು. ಈ ರೀತಿ ಬೆಲೆಗಳು ಏರುತ್ತಿರುವಾಗ ಆಂತರಿಕ ಆಹಾರ ಧಾನ್ಯಗಳ ಕೊರತೆಯನ್ನು ನೀಗಿಸಲು ಸರಕಾರವು ಬೇರೆ ಮಾರ್ಗವನ್ನು ಕಾಣದೆ ಅಮೇರಿಕೆಯಿಂದ ಆಹಾರ ಧಾನ್ಯವನ್ನು ತರಿಸಲೇಬೇಕಾಯಿತು. ಇಲ್ಲದೇ ಹೋಗಿದ್ದರೆ ಎಷ್ಟೋ ಜನರು ಹಸಿವೆಯಿಂದ ಬಳಲಬೇಕಾಗುತ್ತಿತ್ತು.

ಆದ್ದರಿಂದ ಏರುತ್ತಿರುವ ಬೇಸಾಯದ ಹುಟ್ಟುವಳಿಗಳ ಬೆಲೆಗಳು ಹೆಚ್ಚಿನ ಉತ್ಪಾದನೆಗೆ ಪ್ರಬೋಧಕರವಾಗಿವೆ. ಮೇಲಾಗಿ ನಮ್ಮ ಆಹಾರ ಧಾನ್ಯದ ಉತ್ಪಾದನೆಯೂ ಸಹಿತ ಕೆಲಮಟ್ಟಿಗೆ ಹೆಚ್ಚಿದೆ. ೧೯೫೧-೫೨ರಲ್ಲಿ ನಮ್ಮ ಆಹಾರ ಉತ್ಪಾದನೆಯು ೫೪೦ ಲಕ್ಷ ಟನ್ ಇದ್ದದ್ದು ೧೯೬೪-೬೫ ರಲ್ಲಿ ೮೯೦ ಲಕ್ಷ ಟನ್ ಆಗಿತ್ತು. ಆದರೆ ಈಗ ಎರಡು

ವರುಷಗಳಿಂದ ನಿಸರ್ಗದ ವಿಕೋಪದಿಂದಾಗಿ ನಮ್ಮ ಆಹಾರ ಧಾನ್ಯದ ಉತ್ಪಾದನೆಯು ಕಡಿಮೆಯಾಗಿದೆ. ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರಗಳ ಬೆಲೆಗಳು ಹೆಚ್ಚಿಗಿದ್ದದ್ದು ನಿಜ. ಆದರೂ ರೈತರು ಈಗ ರಾಸಾಯನಿಕ ಗೊಬ್ಬರಗಳನ್ನು ಕೊಳ್ಳುತ್ತಿದ್ದಾರೆ. ಅದರ ಬೆಲೆ ಹೆಚ್ಚಿಗಿದ್ದರೂ ಸಹಿತ ಅದರ ಉಪಯೋಗವು ಲಾಭಕರವಾಗಿ ಕಂಡುಬಂದಿದೆ.

ಪ್ರೊಫೆಸರ್ ಸೂಲ್ಜ ಅವರು ತಿಳಿದಂತೆ ನಮ್ಮ ಸರಕಾರವು ಬೇಸಾಯದ ಅಭಿವೃದ್ಧಿಯನ್ನು ಅಲಕ್ಷಿಸಿಲ್ಲ. ಪಂಚವಾರ್ಷಿಕ ಯೋಜನೆಗಳ ಮೂಲಕ ಬೇಸಾಯದಲ್ಲಿ ಸಾಕಷ್ಟು ಸುಧಾರಣೆಗಳನ್ನು ಮಾಡಲು ಪ್ರಯತ್ನಿಸುತ್ತಿದೆ. ಮೂರು ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ನಮ್ಮ ಸರಕಾರವು ೪೫೩೦ ಕೋಟಿ ರೂಪಾಯಿಗಳನ್ನು ಬೇಸಾಯದ ಅಭಿವೃದ್ಧಿಗೆ ವೆಚ್ಚ ಮಾಡಿದೆ.

# ೫ ಬೇಸಾಯ ಮತ್ತು ಸರಕಾರ

ನಮ್ಮ ದೇಶದ ಬೇಸಾಯಗಾರರು ಹೆಚ್ಚಾಗಿ ನಿರಕ್ಷರಿಗಳೇ ಇರುವದರಿಂದ ಬೇಸಾಯವನ್ನು ಅಭಿವೃದ್ಧಿಪಡಿಸುವ ಹೊಣೆಯು ಸರಕಾರದ ಮೇಲೆಯೇ ಬೀಳುತ್ತದೆ. ಸ್ವಾತಂತ್ರ್ಯದ ನಂತರ ಪಂಚವಾರ್ಷಿಕ ಯೋಜನೆಗಳ ಮೂಲಕ ಸರಕಾರವು ಎಷ್ಟೋ ನೀರಾವರಿ ಯೋಜನೆಗಳನ್ನು ಕೈಕೊಂಡಿದೆ. ಬೇಸಾಯಕ್ಕೆ ಸಾಲದ ಸಹಾಯ ಕೊಟ್ಟಿದೆ. ಸಹಕಾರಿ ಚಳುವಳಿಗೆ ಸಹಾಯ ಮಾಡಿದೆ. ಸಣ್ಣ-ಪುಟ್ಟ ಬೇಸಾಯಗಾರರ ಸಂರಕ್ಷಣೆಗೆ ಭೂಸುಧಾರಣಾ ಕಾಯ್ದೆಗಳನ್ನು ಜಾರಿಯಲ್ಲಿ ತಂದಿದೆ. ಈ ರೀತಿಯಾಗಿ ಬೇಸಾಯದ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ನಮ್ಮ ಸರಕಾರವು ಮಹತ್ವದ ಪಾತ್ರ ವಹಿಸಿದೆ. ಬೇಸಾಯದ ಉತ್ಪಾದನೆಯು ನಮ್ಮ ಮೂರು ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕೆಳಗಿನಂತೆ ಹೆಚ್ಚಿದೆ:

## ಬೇಸಾಯದ ಕೆಲವೊಂದು ಹುಟ್ಟುವಳಿಗಳ ಉತ್ಪಾದನೆ:

| | ೧೯೫೦-೫೧ | ೧೯೬೦-೬೧ | ೧೯೬೪-೬೫ | ೧೯೬೫-೬೬ | ೧೯೬೯-೭೦ |
|---|---|---|---|---|---|
| ಆಹಾರ ಧಾನ್ಯಗಳು (ಲಕ್ಷ ಟನ್) | ೫೪೯ | ೮೧೦ | ೮೯೦ | ೭೨೩ | ೯೯೫ |
| ಎಣ್ಣೆ ಕಾಳುಗಳು (ಲಕ್ಷ ಟನ್) | ೫೧ | ೭೦ | ೮೩ | ೬೧ | ೬೭ |
| ಬೆಲ್ಲ " | ೬೯ | ೧೧೨ | ೧೨೩ | ೧೨೧ | ೧೩೪ |
| ಅರಳೆ (ಲಕ್ಷ ಬೇಲ) | ೨೬ | ೫೩ | ೫೪ | ೪೭ | ೫೨ |
| ಸೆಣಬು " | ೩೫ | ೪೧ | ೬೦ | ೪೫ | ೫೬ |

ಮೇಲಿನ ಹುಟ್ಟುವಳಿಗಳಲ್ಲಿ ಸೆಣಬಿನ ಹೊರತಾಗಿ ಉಳಿದೆಲ್ಲವುಗಳೂ ಸಾಮಾನ್ಯ ಜನರ ಉಪಭೋಗದ ವಸ್ತುಗಳಾಗಿವೆ. ನಾವು ೧೯೬೪-೬೫ರಲ್ಲಿಯ ಉತ್ಪಾದನೆಯನ್ನು ೧೯೫೦-೫೧ರಲ್ಲಿ ಉತ್ಪಾದನೆಗೆ ಹೋಲಿಸಿದರೆ ನಮ್ಮ ಬೇಸಾಯದ ಉತ್ಪಾದನೆಯಲ್ಲಿ ನಾವು ಒಳ್ಳೆಯ ಪ್ರಗತಿಯನ್ನು ಮಾಡಿರುವೆವೆಂದು ಹೇಳಬಹುದು. ನಮ್ಮ ಆಹಾರ ಧಾನ್ಯದ ಉತ್ಪಾದನೆಯು ೧೯೫೦-೫೧ರಲ್ಲಿ ಪ್ರತಿ ವ್ಯಕ್ತಿಗೆ ೧೨.೮ ಔಂಸ್ ಇದ್ದದ್ದು ೧೯೬೪-೬೫ರಲ್ಲಿ ೧೫.೪ ಔಂಸುಗಳಿಗೇರಿದೆ. ಮತ್ತು ನಮ್ಮ ಅರಿವೆಯ ಉತ್ಪಾದನೆಯು ೧೯೫೦-೫೧ರಲ್ಲಿ

ಪ್ರತಿ ವ್ಯಕ್ತಿಗೆ ೧೧ ಮೀಟರ ಇದ್ದದ್ದು. ೧೯೭೪-೭೫ರಲ್ಲಿ ೫ ಮೀಟರುಗಳಿಗೇರಿದೆ.

ನಮ್ಮ ಸರಕಾರವು ಜೇಸಾಯಕ್ಕೆ ವಿವಿಧ ರಂಗ ಗಳಲ್ಲಿ ಮಾಡಿದ ಸಹಾಯವನ್ನಿಷ್ಟು ನೋಡುವಾ.

(೧) ಭೂಸುಧಾರಣೆ :

ಮೊದಲನೆಯ ಪಂಚವಾರ್ಷಿಕ ಯೋಜನೆಯ ಪೂರ್ವ ದಲ್ಲಿ, ಜಮೀನುದಾರರು, ಜಹಗೀರುದಾರರು ಮತ್ತು ಇನಾಮು ದಾರರು ಶೇಕಡಾ ೪೦ರಷ್ಟು ಭೂಮಿಯು ಒಡೆಯರಾಗಿದ್ದರು. ಉಳಿದ ಶೇಕಡಾ ೬೦ರಷ್ಟು ರೈತವಾರಿ ಪದ್ಧತಿಯಲ್ಲಿತ್ತು. ರೈತವಾರಿಯಲ್ಲಿಯೂ ಸಹಿತ ಭೂಮಿಯ ಒಡೆತನದಲ್ಲಿ ಬಹಳ ವ್ಯತ್ಯಾಸವಿತ್ತು. ರೈತರಿಗೆ ಯಾವದೇ ತರದ ಸುರಕ್ಷಿತತೆ ಇರಲಿಲ್ಲ. ರೈತರಿಂದ ಭೂ ಮಾಲೀಕರು ತಮಗೆ ಬೇಕಾದಾಗ ಭೂಮಿಯನ್ನು ಕಸಿದುಕೊಳ್ಳಬಹುದಾಗಿತ್ತು. ರೈತರು ಭೂ ಮಾಲೀಕರಿಗೆ ಭೂಮಿಯ ಉತ್ಪನ್ನದ ಅರ್ಧ ಭಾಗವನ್ನು ಬಾಡಿಗೆಯ ರೂಪದಲ್ಲಿ ಕೊಡುತ್ತಿದ್ದರು. ಭೂಮಿಯ ಹಿಡುವಳಿ ಗಳು ಹೆಚ್ಚಾಗಿ ಚಿಕ್ಕವಿದ್ದು ತುಂಡು ಭೂಮಿಗಳು ಹೆಚ್ಚಿಗಿದ್ದವು. ಭೂಮಿಯಿಲ್ಲದ ಜೇಸಾಯದ ಕೂಲಿಕಾರರ ಜನಸಂಖ್ಯೆಯೂ ದೊಡ್ಡದಿತ್ತು. ಇಂಥ ಪ್ರಸಂಗದಲ್ಲಿ ಭೂಸುಧಾರಣಾ ಕಾಯ್ದೆಯ ಉದ್ದೇಶಗಳು ಕೆಳಗಿನಂತಿದ್ದವು:

ಭೂಮಿಯ ಒಡೆತನದಲ್ಲಿಯ ಮಧ್ಯವರ್ತಿಗಳನ್ನು ತೆಗೆದುಹಾಕುವದು. ಭೂ ಬಾಡಿಗೆಯನ್ನು ಒಟ್ಟು ಉತ್ಪಾದನೆಯ ⅓ಕ್ಕೆ ನಿರ್ಧರಿಸುವದು. ರೈತರಿಗೆ ಸುರಕ್ಷಿತತೆ ಒದಗಿಸುವದು, ರೈತರನ್ನು ಭೂಮಿಯ ಒಡೆಯರನ್ನಾಗಿ ಮಾಡಿ ಸರಕಾರಕ್ಕೂ ಮತ್ತು ರೈತರಿಗೂ ನೇರ ಸಂಬಂಧ ತರುವದು. ಭೂಮಿಯ ಒಡೆತನದ ಮೇಲೆ ಒಂದು ಮಿತಿಯನ್ನು ನಿರ್ಧರಿಸಿ, ಹೆಚ್ಚಾದ ಭೂಮಿಯನ್ನು ಭೂಮಿ ಇಲ್ಲದ ಬೇಸಾಯದ ಕೂಲಿಕಾರರಲ್ಲಿ ಹಂಚುವದು. ಭೂಮಿಯ ಏಕತ್ರೀಕರಣವೂ ಸಹಿತ ಮತ್ತೊಂದು ಮಹತ್ವದ ಉದ್ದೇಶವಾಗಿತ್ತು.

**ಮಧ್ಯವರ್ತಿಗಳ ನಿರ್ಮೂಲನೆ :**

ಮೂರು ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಮಧ್ಯವರ್ತಿಗಳ ನಿರ್ಮೂಲನೆಯ ಕಾರ್ಯವನ್ನು ಎಲ್ಲ ರಾಜ್ಯ ಸರಕಾರಗಳೂ ಕೈಕೊಂಡಿವೆ. ಸುಮಾರು ೨ ಕೋಟಿ ರೈತರ ಮಾಲಿಕರಾಗಿದ್ದ ಮಧ್ಯವರ್ತಿಗಳು ಈಗ ಇಲ್ಲದಂತಾಗಿ ಆ ರೈತರು ಭೂಮಿಯ ಒಡೆಯರಾಗಿದ್ದಾರೆ.

**ಭೂಮಿಯ ಹಿಡುವಳಿಯಲ್ಲಿ ಪರಮಾವಧಿ ಮಿತಿ :**

ಭೂಮಿಯ ಹಿಡುವಳಿಗಳಿಗೆ ಪರಮಾವಧಿ ಮಿತಿಯನ್ನು ನಿರ್ಧರಿಸಿ ಎಲ್ಲ ರಾಜ್ಯ ಸರಕಾರಗಳೂ ಕಾಯ್ದೆಗಳನ್ನು ಪಾಸುಮಾಡಿವೆ. ಈ ಪರಮಾವಧಿ ಮಿತಿಯನ್ನು ದಾಟಿದ ಹಿಡುವಳಿಗಳಿಂದ ಹೆಚ್ಚಾದ ಭೂಮಿಯನ್ನು ತೆಗೆದುಕೊಂಡು

7

ಭೂಮಿಯಿಲ್ಲದ ಬೇಸಾಯದ ಕೂಲಿಕಾರರಿಗೆ ಮತ್ತು ಸಣ್ಣ-ಪುಟ್ಟ ರೈತರಿಗೆ ಹಂಚಲು ರಾಜ್ಯ ಸರಕಾರಗಳು ೨೦ ಲಕ್ಷ ಎಕರೆ ಭೂಮಿಯನ್ನು ಪಡೆದಿವೆ.

ಉಳುವವನೆ ಭೂಮಿಯ ಒಡೆಯನೆಸ್ನುವ ತತ್ವವು ಕಳೆದ ೧೫ ವರುಷಗಳಲ್ಲಿ ಎಷ್ಟೋ ರೈತರು ಭೂಮಿಯ ಮಾಲಿಕರಾಗಲು ಸಹಾಯ ಮಾಡಿದೆ. ೧೯೬೧ನೆಯ ಜನ ಗಣತಿಯ ಪ್ರಕಾರ ಶೇಕಡಾ ೨೬ರಷ್ಟು ರೈತರು ಭೂಮಿಯ ಮಾಲಕರಿದ್ದರು.

**ಭೂಮಿಯಿಲ್ಲದ ಬೇಸಾಯದ ಕೂಲಿಕಾರರು :**

ಪರಮಾವಧಿಗಿಂತ ದೊಡ್ಡವಿದ್ದ ಹಿಡುವಳಿಗಳಿಂದ ತೆಗೆದು ಕೊಂಡ ಭೂಮಿಯ ಹೊರತಾಗಿ ಬಹಳಷ್ಟು ಬೀಳು ಭೂಮಿಯೂ ಎಲ್ಲ ರಾಜ್ಯಗಳಲ್ಲಿಯೂ ಇತ್ತು. ಇಂಥ ಭೂಮಿಯ ಒಡೆತನವು ರಾಜ್ಯ ಸರಕಾರದಲ್ಲಿತ್ತು. ಅಂಥ ಭೂಮಿಯನ್ನು ಭೂಮಿ ಇಲ್ಲದ ಬೇಸಾಯದ ಕೂಲಿಕಾರರಿಗೆ ಹಂಚಲಾಗಿದೆ. ಕಳೆದ ೧೫ ವರುಷಗಳಲ್ಲಿ ಸುಮಾರು ೧ ಕೋಟಿ ಎಕರೆಯಷ್ಟು ಅಂಥ ಭೂಮಿಯನ್ನು ಹಂಚಲಾಗಿದೆಯೆಂದು ಅಂದಾಜು ಮಾಡಲಾಗಿದೆ.

**ತುಂಡು ಜಮೀನುಗಳು :**

ನಮ್ಮ ದೇಶದಲ್ಲಿ ಹೆಚ್ಚಾಗಿ ಸಣ್ಣ ಹಿಡುವಳಿಗಳೇ ಇವೆ ಯೆಂದು ನಾವು ಈ ಹಿಂದೆ ನೋಡಿದ್ದೇವೆ. ಈ ಸಣ್ಣ ಹಿಡು

ವಳಿಗಳು ಜನಸಂಖ್ಯೆ ಬೆಳೆದಂತೆ ಇನ್ನೂ ಸಣ್ಣವಾಗುತ್ತ ಹೋಗುತ್ತವೆ. ಎಷ್ಟೊ ರಾಜ್ಯ ಸರಕಾರಗಳು ಭೂಮಿಯ ಹಿಡುವಳಿಯನ್ನು ಕೆಲವೊಂದು ನಿರ್ದಿಷ್ಟ ಪ್ರಮಾಣಕ್ಕಿಂತಲೂ ಕಡಿಮೆ ಮಾಡದಂತೆ ಕಾಯ್ದೆಗಳನ್ನು ಪಾಸು ಮಾಡಿವೆ. ಆದರೆ ಬೆಳೆಯುತ್ತಿರುವ ಜನಸಂಖ್ಯೆಯಿಂದ, ಬೇಸಾಯೇತರ ಉದ್ಯೋಗಗಳ ಅಭಾವದಿಂದ, ಈ ಕಾಯ್ದೆಗಳು ಅಷ್ಟು ಪರಿಣಾಮಕಾರಿಗಳಾಗಿಲ್ಲ. ಇಂಥ ಪ್ರಸಂಗದಲ್ಲಿ ಸಹಕಾರಿ ಬೇಸಾಯವು ಬಹಳ ಉಪಯುಕ್ತವಾಗುತ್ತದೆ. ನಮ್ಮ ದೇಶದ ಮುಂದಿರುವ ಸಮಸ್ಯೆಯೆಂದರೆ, ಸಣ್ಣ-ಪುಟ್ಟ ರೈತರ ಉತ್ಪಾದನೆಯನ್ನು ಹೆಚ್ಚಿಸುವದಾಗಿದೆ. ಈ ದಿಸೆಯಲ್ಲಿ ಜಪಾನ ದೇಶದ ಅನುಭವವು ನಮಗೆ ಒಳ್ಳೆಯ ನಿದರ್ಶನವಾಗಬಲ್ಲದು. ಜಪಾನ ದೇಶವು ತನ್ನ ಸಣ್ಣ ಹಿಡುವಳಿಗಳ ಮೂಲಕವೇ ಬೇಸಾಯದ ಉತ್ಪಾದನೆಯನ್ನು ಹೆಚ್ಚಿಸಿತು. ಬೇಸಾಯದ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಸಹಕಾರಿ ಚಳುವಳಿಯು ಮಹತ್ವದ ಪಾತ್ರ ವಹಿಸಬಲ್ಲದು. ಸಹಕಾರಿ ಸೇವಾ ಸಂಘಗಳು ಸಣ್ಣ ರೈತರಿಗೆ ಸಾಲದ ಸೌಲಭ್ಯ ಮತ್ತು ಉತ್ಪಾದನೆ ಹೆಚ್ಚಿಸಲು ಬೇಕಾದ ಸಾಮಾನುಗಳನ್ನು ಪೂರೈಸಬಲ್ಲವು.

### ಭೂಮಿಯ ಏಕತ್ರೀಕರಣ :

ನಮ್ಮ ದೇಶದ ರೈತರ ಹಿಡುವಳಿಗಳು ಚಿಕ್ಕವಿರುವದಲ್ಲದೇ, ಇದ್ದಷ್ಟು ಭೂಮಿಯು ಒಂದೇ ಕಡೆಗೆ ಇರುವದಿಲ್ಲ.

ಇಂಥ ಪರಿಸ್ಥಿತಿಯಲ್ಲಿ ಒಂದೇ ಉಪಾಯವೆಂದರೆ ಭೂಮಿಯ ಏಕತ್ರೀಕರಣ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ೨೮೦ ಲಕ್ಷ ಎಕರೆ ಭೂಮಿಯನ್ನು ಏಕತ್ರೀಕರಣ ಮಾಡಲಾಗಿದೆ.

## ( ೨ ) ಸಹಕಾರ :

ಪಂಚವಾರ್ಷಿಕ ಯೋಜನೆಗಳು, ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ, ಸಹಕಾರಕ್ಕೆ ಮಹತ್ವದ ಸ್ಥಾನ ಕೊಟ್ಟಿವೆ. ಬೇಸಾಯ, ಚಿಕ್ಕ ಉದ್ದಿಮೆ, ಮಾರಾಟ, ರೂಪಾಂತರ, ಹಂಚುವಿಕೆ ಮುಂತಾದ ಚಟುವಟಿಕೆಗಳಲ್ಲಿ ಸಹಕಾರವು ಬಹು ಪ್ರಮುಖ ಪಾತ್ರ ವಹಿಸಬಲ್ಲದು. ನಮ್ಮ ದೇಶದಲ್ಲಿ ೧೯೬೪ರ ಜೂನ ತಿಂಗಳ ಅಂತ್ಯದಲ್ಲಿ ಶೇಕಡಾ ೭೩ರಷ್ಟು ಹಳ್ಳಿಗಳಿಗೆ ಸಹಕಾರಿ ಸಂಘಗಳು ತಲುಪಲ್ಪಟ್ಟಿವೆ. ೧೯೬೧ರ ಜೂನ ತಿಂಗಳ ಅಂತ್ಯದಲ್ಲಿ ಶೇಕಡಾ ೭೫ರಷ್ಟು ಹಳ್ಳಿಗಳಿಗೆ ಸಹಕಾರಿ ಸಂಘಗಳು ತಲುಪಲ್ಪಟ್ಟಿದ್ದವು. ಇದೇ ಸಮಯದಲ್ಲಿ ಸಹಕಾರಿ ಸಂಘಗಳ ಸದಸ್ಯರ ಸಂಖ್ಯೆ ೧೭೦ ಲಕ್ಷದಿಂದ ೨೪೦ ಲಕ್ಷಕ್ಕೇರಿದೆ ೧೯೬೧ ಜೂನ ತಿಂಗಳಲ್ಲಿ ಸಹಕಾರಿ ಸಂಘಗಳು, ಗ್ರಾಮಾಂತರ ಜನಸಂಖ್ಯೆಯ ಶೇಕಡಾ ೨೪ಕ್ಕೆ ಮುಟ್ಟಿದ್ದವು. ಆದರೆ ೧೯೬೫ರ ಜೂನ ತಿಂಗಳಲ್ಲಿ ಸಹಕಾರಿ ಸಂಘಗಳು ಗ್ರಾಮಾಂತರ ಜನಸಂಖ್ಯೆಯ ಶೇಕಡಾ ೩೩ಕ್ಕೆ ತಲುಪಿವೆ.

**ಸಹಕಾರಿ ಸಾಲ :**

ದ್ವಿತೀಯ ಪಂಚವಾರ್ಷಿಕ ಯೋಜನೆಯಿಂದೀಚೆಗೆ ಸಹಕಾರಿ ಸಂಘಗಳಿಂದ ಕೊಡಲ್ಪಟ್ಟ ಸಾಲದ ಮೊತ್ತವು ಹೆಚ್ಚುತ್ತಾ ನಡೆದಿದೆ. ೧೯೫೧-೫೨ರಲ್ಲಿ ರಿಜರ್ವ ಬ್ಯಾಂಕಿನ ಅಖಿಲ ಭಾರತ ಗ್ರಾಮಾಂತರ ಸಾಲ ನಿರೀಕ್ಷಣಾ ಸಮಿತಿಯ ಪ್ರಕಾರ, ರೈತರು ಪಡೆಯುವ ವಾರ್ಷಿಕ ಸಾಲವು ಇಡೀ ದೇಶಕ್ಕೆ ೭೫೦ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿತ್ತು. ಇದರಲ್ಲಿ ಸಹಕಾರಿ ಸಂಘಗಳು ಶೇಕಡಾ ೩.೧ರಷ್ಟು ಮಾತ್ರ ಪೂರೈಸುತ್ತಿದ್ದವು. ಆದರೆ ೧೯೬೧-೬೨ರಲ್ಲಿ ರಿಜರ್ವ ಬ್ಯಾಂಕಿನ "ಅಖಿಲ ಭಾರತ ಗ್ರಾಮಾಂತರ ಸಾಲ ಮತ್ತು ಬಂಡವಾಳ ತೊಡಗಿಸುವ ನಿರೀಕ್ಷಣೆಯು" ಮೇರೆಗೆ ರೈತರು ಒಟ್ಟು ಪಡೆಯುವ ವಾರ್ಷಿಕ ಸಾಲದ ಮೊತ್ತ ೧೦೩೪ ಕೋಟಿ ರೂಪಾಯಿಗಳು. ಇದರಲ್ಲಿ ಸಹಕಾರಿ ಸಂಘಗಳು ಶೇಕಡಾ ೨೬ರಷ್ಟು ಹಣವನ್ನು ಪೂರೈಸುತ್ತವೆಯೆಂದು ಆ ಸಮಿತಿಯು ಅಂದಾಜು ಮಾಡಿದೆ. ಸಹಕಾರಿ ಸಂಘಗಳು ಕೊಡುವ ಸಾಲದ ಹಣದ ಮೊತ್ತವು ಹೆಚ್ಚಿಗೆಯಾಗಿದ್ದರೂ ಕೂಡ ಅದರ ಲಾಭವು ಎಲ್ಲ ರಾಜ್ಯಗಳಿಗೂ ಮುಟ್ಟಿಲ್ಲ ೧೯೬೧-೬೨ರಲ್ಲಿ ಮಹಾರಾಷ್ಟ್ರದಲ್ಲಿ ಬೇಸಾಯಗಾರರು ಪಡೆಯುವ ಒಟ್ಟು ಸಾಲದ ಶೇಕಡಾ ೫೫ರಷ್ಟು ಸಹಕಾರಿ ಸಂಘಗಳು ಪೂರೈಸುತ್ತಿದ್ದವು. ಈ ಪ್ರಮಾಣವು ಗುಜರಾತದಲ್ಲಿ ೪೧, ಮದ್ರಾಸದಲ್ಲಿ ೩೧ ಮತ್ತು

ಆಸಾಮು, ಬಿಹಾರ, ರಾಜಸ್ಥಾನಗಳಲ್ಲಿ ೧೦ಕ್ಕಿಂತಲೂ ಕಡಿಮೆ ಇತ್ತು. ಉಳಿದ ರಾಜ್ಯಗಳಲ್ಲಿ ಈ ಪ್ರಮಾಣವು ೩೦ಕ್ಕಿಂತಲೂ ಕಡಿಮೆ ಇತ್ತು.

ಸಹಕಾರಿ ಸಂಘಗಳು ಸಾಲವನ್ನು ಭೂಮಿಯ ಆಧಾರದ ಮೇಲೆಯೇ ಕೊಡುತ್ತವೆ. ಬೆಳೆಯ ಆಧಾರದ ಮೇಲೆ ಸಾಲವನ್ನು ಕೊಡುವ ಪದ್ಧತಿಯು ಅನೇಕ ರಾಜ್ಯಗಳಲ್ಲಿ ಇನ್ನೂ ಜಾರಿಗೆ ಬಂದಿಲ್ಲ.

**ಸಹಕಾರಿ ಮಾರಾಟ:**

ಸಹಕಾರಿ ಸಾಲಕ್ಕೆ ಹೋಲಿಸಲಾಗಿ, ಸಹಕಾರಿ ಮಾರಾಟವು ತೀರ ಇತ್ತೀಚಿನದು. ದ್ವಿತೀಯ ಪಂಚವಾರ್ಷಿಕ ಯೋಜನೆಯಿಂದೀಚೆಗೆ ಸಹಕಾರಿ ಮಾರಾಟ ಸಂಘಗಳನ್ನು ಸ್ಥಾಪಿಸಲು ಮತ್ತು ಇದ್ದ ಮಾರಾಟ ಸಂಘಗಳನ್ನು ಪುನರುಜ್ಜೀವಗೊಳಿಸಲು ಕ್ರಮ ಕೈಕೊಳ್ಳಲಾಯಿತು. ೧೯೬೫ ಜೂನ ತಿಂಗಳಲ್ಲಿ ದೇಶದಲ್ಲಿ ಸುಮಾರು ೩೧೦೦ ಪ್ರಾಥಮಿಕ ಮಾರಾಟ ಸಂಘಗಳೂ, ೧೬೦ ಜಿಲ್ಲಾ ಮಟ್ಟದ ಮಾರಾಟ ಸಂಘಗಳೂ ಮತ್ತು ೧೯ ಅಪೆಕ್ಸ ಮಾರಾಟ ಸಂಘಗಳೂ ಇದ್ದವು.

**ಸಹಕಾರಿ ರೂಪಾಂತರ:**

ಮಾರಾಟ ಮತ್ತು ರೂಪಾಂತರಗಳು ಒಂದಕ್ಕೊಂದು ಜೋಡಿಸಲ್ಪಟ್ಟಿವೆ. ದ್ವಿತೀಯ ಪಂಚವಾರ್ಷಿಕ ಯೋಜ

ನೆಯ ಅವಧಿಯಲ್ಲಿ ೪೬೪ ಸಹಕಾರಿ ರೂಪಾಂತರ ಸಂಘಗಳು ರಾಜ್ಯಸರಕಾರಗಳಿಂದ ಸಹಾಯ ಪಡೆಯುತ್ತಿದ್ದವು. ಮೂರನೆ ಪಂಚವಾರ್ಷಿಕ ಯೋಜನೆಯಲ್ಲಿ ೫೦೪ ರೂಪಾಂತರ ಸಂಘ ಗಳು ರಾಜ್ಯ ಸರಕಾರಗಳಿಂದ ಸಹಾಯ ಪಡೆದಿವೆ. ಇದರ ಹೊರತಾಗಿ ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಮಂಡಲವು (National Co-operative Development Corporation) ೪೭೦ ಸಣ್ಣ ಅಕ್ಕಿ ಮಿಲ್ಲುಗಳಿಗೆ ಮತ್ತು ೫ ಅತ್ಯಾಧುನಿಕ ಮಿಲ್ಲುಗಳಿಗೆ ಸಹಾಯ ಕೊಟ್ಟಿದೆ. ಇವೆಲ್ಲವು ಗಳ ಫಲವಾಗಿ ಸಹಕಾರಿ ರೂಪಾಂತರ ಸಂಘಗಳ ಚಟು ವಟಿಕೆಗಳಲ್ಲಿ ಹೆಚ್ಚಳವಾಗಿದೆ. ಸಹಕಾರಿ ಸಕ್ಕರೆ ಕಾರ್ಖಾನೆ ಗಳೂ ಹೆಚ್ಚುತ್ತಾ ನಡೆದಿವೆ. ೧೯೫೫-೫೬ರಲ್ಲಿ ಕೇವಲ ೩ ಸಹಕಾರಿ ಸಕ್ಕರೆ ಕಾರ್ಖಾನೆಗಳಿದ್ದವು. ಈ ಮೂರು ಸಕ್ಕರೆ ಕಾರಖಾನೆಗಳು ದೇಶದ ಒಟ್ಟು ಸಕ್ಕರೆ ಉತ್ಪಾದನೆಯ ಶೇಕಡಾ ೧.೬ರಷ್ಟು ಸಕ್ಕರೆಯನ್ನು ಉತ್ಪಾದಿಸುತ್ತಿದ್ದವು. ೧೯೬೫-೬೬ರಲ್ಲಿ ೫೧ ಸಹಕಾರಿ ಸಕ್ಕರೆ ಕಾರಖಾನೆಗಳಿದ್ದವು. ಇವು ದೇಶದ ಸಕ್ಕರೆ ಉತ್ಪಾದನೆಯ ಶೇಕಡಾ ೨೬ರಷ್ಟು ಭಾಗವನ್ನು ಉತ್ಪಾದಿಸುತ್ತಿದ್ದವು.

**ಸಹಕಾರಿ ಬೇಸಾಯ ಪೂರೈಕೆಗಳು:**

ಬೇಸಾಯಕ್ಕೆ ಬೇಕಾಗುವ ರಾಸಾಯನಿಕ ಗೊಬ್ಬರ ಬೀಜ, ಕ್ರಿಮಿನಾಶಕಗಳು, ಉಪಕರಣಗಳು ಮುಂತಾದವು

ಗಳನ್ನು ಪೂರೈಸುವದು ಸಹಕಾರದ ಮತ್ತೊಂದು ಚಟುವಟಿಕೆ ಯಾಗಿದೆ. ೧೯೫೫-೫೬ರಲ್ಲಿ ಸಹಕಾರವು ಪೂರೈಸಿದ ಅಂಥ ವಸ್ತುಗಳ ಬೆಲೆಯು ಸುಮಾರು ೩ ಕೋಟಿ ರೂಪಾಯಿ ಇತ್ತು. ೧೯೬೪-೬೫ರಲ್ಲಿ ಸಹಕಾರವು ಬೇಸಾಯಗಾರರಿಗೆ ಪೂರೈಸಿದ ವಸ್ತುಗಳ ಬೆಲೆಯು ೧೦೪ ಕೋಟಿ ರೂಪಾಯಿಗಳಿಗೇರಿತು. ಅದೇ ವರುಷ ಸಹಕಾರವು ಬೇಸಾಯಗಾರರಿಗೆ ಪೂರೈಸಿದ ರಾಸಾಯನಿಕ ಗೊಬ್ಬರದ ಬೆಲೆಯು ೭೩ ಕೋಟಿ ರೂಪಾಯಿ ಗಳಷ್ಟಿತ್ತು. ಇದು ಇಡೀ ದೇಶದಲ್ಲಿ ಮಾರಾಟವಾದ ಒಟ್ಟು ರಾಸಾಯನಿಕ ಗೊಬ್ಬರದ ಶೇಕಡಾ ೭೩ರಷ್ಟಿದೆ.

## ಸಾಲ ಮತ್ತು ಮಾರಾಟದ ಜೋಡಣೆ:

ಸಹಕಾರಿ ಸಾಲ ಮತ್ತು ಸಹಕಾರಿ ಮಾರಾಟ ಜೋಡಣೆಯಲ್ಲಿ ಈ ವರೆಗೆ ಮಾಡಿದ ಪ್ರಗತಿಯು ಅಷ್ಟು ಸಮಾಧಾನಕರವಾಗಿಲ್ಲ. ೧೯೬೪-೬೫ರಲ್ಲಿ ಒಟ್ಟು ೨ ಲಕ್ಷ ಪ್ರಾಥಮಿಕ ಬೇಸಾಯ ಸಾಲದ ಸಂಘಗಳ ಪೈಕಿ ಕೇವಲ ೧ ಲಕ್ಷ ೨೫ ಸಾವಿರ ಸಂಘಗಳು ಸಾಲ ಮತ್ತು ಮಾರಾಟ ಜೋಡಣೆ ಮಾಡಿದ್ದವು. ಮತ್ತು ಅದೇ ವರುಷ ಸಹಕಾರಿ ಮಾರಾಟ ಮತ್ತು ರೂಪಾಂತರ ಸಂಘಗಳು ಆ ವರುಷ ಮರಳಿ ಪಡೆದ ಸಾಲದ ಶೇಕಡಾ ೧೦ ರಷ್ಟು ಮೊತ್ತವನ್ನು ಮಾತ್ರ ವಸೂಲಿ ಮಾಡಿಕೊಟ್ಟವು.

## ಸಹಕಾರಿ ಮಳಿಗೆಗಳು:

ಸಹಕಾರಿ ಮಳಿಗೆಗಳನ್ನು ಕಟ್ಟುವ ಯೋಜನೆಯನ್ನು ದ್ವಿತೀಯ ಪಂಚವಾರ್ಷಿಕ ಯೋಜನೆಯ ಕಾಲಕ್ಕೆ ಕೈಕೊಳ್ಳಲಾಯಿತು. ಇದನ್ನು ಮೂರನೆ ಪಂಚವಾರ್ಷಿಕ ಯೋಜನೆಯಲ್ಲಿಯೂ ಮುಂದುವರಿಸಿಕೊಂಡು ಬರಲಾಯಿತು. ದ್ವಿತೀಯ ಪಂಚವಾರ್ಷಿಕ ಯೋಜನೆಯ ಕಾಲಕ್ಕೆ ೧೭೧೬ ಪೇಟೆಗಳಲ್ಲಿ ಮಳಿಗೆಗಳನ್ನು ಕಟ್ಟಲು ಮತ್ತು ೪೯೮೫ ಗ್ರಾಮಗಳಲ್ಲಿ ಮಳಿಗೆಗಳನ್ನು ಕಟ್ಟಲು ಸಹಾಯವನ್ನು ಕೊಡಲಾಯಿತು. ಇದರ ಹೊರತಾಗಿ ಸಹಕಾರಿ ಸಂಘಗಳು ತಾವೇ ಸ್ವತಃ ೧೦೦೦ ಪೇಟೆಗಳಲ್ಲಿ ಮತ್ತು ೧೫೦೦ ಗ್ರಾಮಗಳಲ್ಲಿ ಮಳಿಗೆಗಳನ್ನು ಕಟ್ಟಸಿವೆ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ೮೦೦ ಪೇಟೆಗಳಲ್ಲಿ ೬೬೦ ಗ್ರಾಮಗಳಲ್ಲಿ ಮಳಿಗೆಗಳನ್ನು ಕಟ್ಟಲು ಸಹಕಾರಿ ಸಂಘಗಳಿಗೆ ಸಹಾಯ ಮಾಡಲಾಗಿದೆ.

## ಸಹಕಾರಿ ಬೇಸಾಯ:

ಸಹಕಾರಿ ಬೇಸಾಯಕ್ಕೆ ಪಂಚವಾರ್ಷಿಕ ಯೋಜನೆಗಳಲ್ಲಿ ಮಹತ್ವದ ಸ್ಥಾನ ಕೊಡಲಾಗಿದೆ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ೩೧೮ ಪಾಯಲಟ ಯೋಜನೆಗಳನ್ನು ತಯಾರ ಮಾಡಲಾಯಿತು. ಪ್ರತಿಯೊಂದು ಪಾಯಲಟ ಯೋಜನೆಯಲ್ಲಿ ೧೦ ಸಹಕಾರಿ ಬೇಸಾಯ ಸಂಘಗಳಿದ್ದವು. ಇವುಗಳ ಉದ್ದೇಶವು ರೈತರು ತಮ್ಮ ಜಮೀನು ಮತ್ತು

ಉಳಿದ ಸಾಧನ ಸಲಕರಣೆಗಳನ್ನು ಒಂದುಗೂಡಿಸಿ ಬೇಸಾಯ ಕೈಕೊಳ್ಳುವದರಿಂದಾಗುವ ಲಾಭವನ್ನು ಅವರಿಗೆ ತೋರಿಸಿ ಕೊಡುವದಾಗಿತ್ತು. ೧೯೭೫ ಡಿಸೆಂಬರ ಸುಮಾರಿಗೆ ೫ ಸಾವಿರ ಸಹಕಾರಿ ಬೇಸಾಯ ಸಂಘಗಳಿದ್ದವು.

**ನೀರಾವರಿ ಸೌಲಭ್ಯ:**

ನಮ್ಮ ದೇಶದಲ್ಲಿ ನಾವು ಒಟ್ಟು ೧೧೨೦ ಲಕ್ಷ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಮಾಡಿ ಕೊಡಬಹುದಾಗಿದೆ. ಮೊದಲನೆ ಪಂಚವಾರ್ಷಿಕ ಯೋಜನೆಯ ಪೂರ್ವದಲ್ಲಿ, ಅಂದರೆ ೧೯೫೦-೫೧ರಲ್ಲಿ ಒಟ್ಟು ನೀರಾವರಿ ಸೌಲಭ್ಯ ಪಡೆದ ಭೂಮಿ ೫೬೦ ಲಕ್ಷ ಎಕರೆಯಾಗಿತ್ತು. ಅದರ ಪೈಕಿ ೨೪೦ ಲಕ್ಷ ಎಕರೆ ದೊಡ್ಡ ಮತ್ತು ಮಧ್ಯಮ ನೀರಾವರಿ ಯೋಜನೆಯಿಂದ ಲಾಭ ಪಡೆದಿತ್ತು. ಮೂರು ಪಂಚವಾರ್ಷಿಕ ಯೋಜನೆಯಲ್ಲಿ ನಾವು ೧೪೦ ಲಕ್ಷ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಮಾಡಿ ಕೊಟ್ಟಿದ್ದೇವೆ. ನಾವು ಇನ್ನೂ ೨೦೦ ಲಕ್ಷ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಮಾಡಿ ಕೊಡುವದಿದೆ.

ನಾಲ್ಕು ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ನಮ್ಮ ಸರಕಾರವು ದೊಡ್ಡ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಗೆ ಕೆಳಗಿನಂತೆ ಹಣ ಖರ್ಚು ಮಾಡಿದೆ:

| ೧ನೆಯ ಪಂಚವಾರ್ಷಿಕ ಯೋಜನೆ | ೨ನೆಯ ಯೋಜನೆ | ೩ನೆಯ ಯೋಜನೆ | ೪ನೆಯ ಯೋಜನೆ |
|---|---|---|---|
| ೩೦೦ ಕೋಟಿ | ೩೮೦ ಕೋಟಿ | ೫೭೨ ಕೋಟಿ | ೬೮೫ ಕೋಟಿ |

## (೪) ಗ್ರಾಮಾಂತರ ನಿರುದ್ಯೋಗತನ ಮತ್ತು ತಲೆಮರೆಸಿದ ನಿರುದ್ಯೋಗತನ:

ದೇಶದ ಅನೇಕ ಭಾಗಗಳಲ್ಲಿ ಭೂಮಿಯ ಮೇಲೆ ಜನಸಂಖ್ಯೆಯ ಭಾರ ಹೆಚ್ಚಾಗಿದೆ. ಇಂಥ ಪರಿಸ್ಥಿತಿಯಲ್ಲಿ ಬೇಸಾಯವು ಅವರೆಲ್ಲರಿಗೂ ವರುಷವಿಡೀ ಉದ್ಯೋಗವನ್ನು ಕಲ್ಪಿಸಿಕೊಡಲು ಅಸಮರ್ಥವಾಗಿದೆ. ಬೆಳೆಯುತ್ತಿರುವ ಜನಸಂಖ್ಯೆ, ಬೇಸಾಯೇತರ ಚಟುವಟಿಕೆಗಳ ಮಂದಗತಿಯ ಪ್ರಗತಿ ಮತ್ತು ಭೂಮಿಯ ಮಾಲಕರು ತಾವೇ ಸ್ವತಃ ಭೂಮಿಯನ್ನು ಸಾಗುವಳಿ ಮಾಡುವದು, ಮುಂತಾದ ಕಾರಣಗಳಿಂದಾಗಿ ಸಣ್ಣ-ಪುಟ್ಟ ರೈತರು ಮತ್ತು ಭೂಮಿಯಿಲ್ಲದ ಬೇಸಾಯದ ಕೂಲಿಕಾರರಿಗೆ ವರ್ಷವಿಡೀ ಕೆಲಸವಿಲ್ಲದೆ ಅವರ ಉತ್ಪನ್ನವು ಮತ್ತಷ್ಟು ಕಡಿಮೆಯಾಗುತ್ತದೆ. ಇದಕ್ಕೆ ಉಪಾಯವೆಂದರೆ ವೈಜ್ಞಾನಿಕ ರೀತಿಯ ಬೇಸಾಯ ಮತ್ತು ಗ್ರಾಮಾಂತರ ವಿದ್ಯುದ್ಯೋಜನೆಯಿಂದ ಸಣ್ಣ ಮತ್ತು ರೂಪಾಂತರ ಉದ್ಯೋಗಗಳನ್ನು ಕಲ್ಪಿಸಿಕೊಡುವದಾಗಿದೆ. ಈ ರೀತಿಯ ಗ್ರಾಮಾಂತರ ಯೋಜನೆಗಳಿಗೆ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ

ಅವಕಾಶ ಕಲ್ಪಿಸಿ ಕೊಡಲಾಗಿತ್ತು. ಈ ಯೋಜನೆಯಲ್ಲಿ ಸುಮಾರು ೨೫ ಲಕ್ಷ ಜನರಿಗೆ ೧೦೦ ದಿನಗಳ ವರೆಗೆ ಉದ್ಯೋಗ ಕಲ್ಪಿಸಿ ಕೊಡುವ ಉದ್ದೇಶವಿತ್ತು. ಆದರೆ ಕೆಲವೊಂದು ಅನಾನುಕೂಲತೆಗಳ ಮೂಲಕ ಈ ಗುರಿಯನ್ನು ಮುಟ್ಟಲು ಸಾಧ್ಯವಾಗಲಿಲ್ಲ.

ಈ ರೀತಿಯಾಗಿ ನಮ್ಮ ಸರಕಾರವು ರೈತನ ಏಳ್ಗೆಗಾಗಿ ಎಷ್ಟೋ ಪ್ರಕಾರದ ಕಾರ್ಯಗಳನ್ನು ಮಾಡುತ್ತಿದೆ.

## ( ೫ ) ಸಾಮೂಹಿಕಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ:

**(Community Development and Panchayat Raj).**

ಸಾಮೂಹಿಕಾಭಿವೃದ್ಧಿ ಕಾರ್ಯಕ್ರಮವು ಈಗ ಎಲ್ಲ ಗ್ರಾಮಗಳನ್ನೊಳಗೊಂಡಿದೆ ಗ್ರಾಮದ ಎಲ್ಲ ವ್ಯವಸಾಯಗಾರರೂ, ವ್ಯವಸಾಯಿಕ ಪ್ರಯತ್ನದಲ್ಲಿ ಭಾಗಿಗಳಾಗುವಂತೆ ಮಾಡಲು ಮತ್ತು ಸ್ಥಳೀಯ ಸಾಧನ ಸಂಪತ್ತುಗಳನ್ನು ಪರಿಣಾಮಕರವಾಗಿ ಕೂಡಿಸಲು ಗ್ರಾಮ ಉತ್ಪಾದನಾ ಯೋಜನೆಯು ಎರಡು ಕಾರ್ಯಕ್ರಮಗಳ ಗುಂಪುಗಳನ್ನೊಳಗೊಂಡಿದೆ.

(i) ಸಾಲ, ರಾಸಾಯನಿಕ ಗೊಬ್ಬರ, ಸುಧಾರಿಸಿದ ಬೀಜಗಳು, ಸಸ್ಯ ಸಂರಕ್ಷಣೆ ಮತ್ತು ಸಣ್ಣ ನೀರಾವರಿ ಮೊದಲಾದ ಸೌಲಭ್ಯ ಒದಗಿಸುವದು.

(ii) ದೊಡ್ಡ ನೀರಾವರಿ ಯೋಜನೆಗಳಿಂದ ನೀರಾವರಿ ಸೌಕರ್ಯ ಪಡೆಯಲು ನೀರಾವರಿ ಕಾಲುವೆಗಳನ್ನು ತೋಡುವದು, ನೀರಾವರಿ ಕಾಲುವೆಗಳನ್ನೂ ಅವುಗಳ ದಡಗಳನ್ನೂ ಸರಿಯಾದ ರೀತಿಯಲ್ಲಿ ಇಟ್ಟುಕೊಳ್ಳುವದು, ಹಳ್ಳಗಳ ದಡ ಕಟ್ಟುವದು, ಹಳ್ಳಿಗಳ ಕೆರೆಗಳನ್ನು ಆಳಮಾಡುವದು ಮತ್ತು ಸರಿಯಾಗಿ ಇಟ್ಟುಕೊಳ್ಳುವದು, ಸ್ಥಳೀಯ ಗೊಬ್ಬರಗಳ ಸಾಧನ ಸಂಪತ್ತುಗಳನ್ನು ಮತ್ತು ಸೌದೆ ತೋಪುಗಳನ್ನು ಅಭಿವೃದ್ಧಿ ಪಡಿಸುವದು ಮತ್ತು ಬಳಸಿಕೊಳ್ಳುವದು ಮೊದಲಾದ ಕಾರ್ಯಕ್ರಮಗಳು.

ಎರಡನೆಯ ಗುಂಪಿನ ಕಾರ್ಯಕ್ರಮಗಳಲ್ಲಿ ಗ್ರಾಮಸ್ಥರು ಉತ್ಸಾಹ ತೋರಿಸಬೇಕಾದರೆ ಮತ್ತು ಸಹಕಾರ ನೀಡಬೇಕಾದರೆ ಅವರಿಗೆ ಸಾಲ ಮತ್ತಿತರ ಪದಾರ್ಥಗಳನ್ನು ದಕ್ಷ ರೀತಿಯಲ್ಲಿ ಪೂರೈಕೆ ಮಾಡಬೇಕಾದುದೂ ಮತ್ತು ವಿಸ್ತರಣ ಕಾರ್ಯಕರ್ತರು ಅವರಿಗೆ ಸರಿಯಾದ ರೀತಿಯಲ್ಲಿ ಪಾರಿಭಾಷಿಕ ಸಲಹೆ ನೀಡಬೇಕಾದುದೂ ಅತ್ಯಗತ್ಯ.

**ಪಂಚಾಯತಿ ರಾಜ್ಯ:**

ಪಂಚಾಯತಿ ರಾಜ್ಯವನ್ನು ಈಗ ಜಾರಿಗೆ ತಂದಿರುವ

ರಿಂದ ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳನ್ನು ರಾಜ್ಯ ಸ
ಕಾರದ ನಿರ್ದೇಶನ ಮತ್ತು ಮೇಲ್ವಿಚಾರಣೆಗೊಳಪಟ್ಟು ಜಾರಿ
ತರುವ ಜವಾಬ್ದಾರಿಯನ್ನು ಗ್ರಾಮಗಳಲ್ಲಿ ಪಂಚಾಯತಿಗಳನು
ಮತ್ತು ಜಿಲ್ಹಾ ಮಟ್ಟದಲ್ಲಿ ಜಿಲ್ಹಾ ಪರಿಷತ್ತುಗಳನು
ಒಳಗೊಂಡಿರುವ ಅಭಿವೃದ್ಧಿ ಕ್ಷೇತ್ರದ ಪಂಚಾಯತಿ ಸಮಿತಿ
ವಹಿಸಲಾಗಿದೆ. ಇಡೀ ಜನತೆಯ ಹಿತಾಸಕ್ತಿಗಳನ್ನು ಗಮನ
ದಲ್ಲಿಟ್ಟುಕೊಂಡು ಪ್ರತಿಯೊಂದು ಪ್ರದೇಶದಲ್ಲಿ ಜನತೆಯು
ತೀವ್ರ ಮತ್ತು ನಿರಂತರ ಅಭಿವೃದ್ಧಿ ಕಾರ್ಯವನ್ನು
ಕೈಕೊಳ್ಳುವಂತೆ ಮಾಡುವದು ಪಂಚಾಯತಿ ರಾಜ್ಯದ ಆದ್ಯ
ಕರ್ತವ್ಯವಾಗಿದೆ. ಪಂಚಾಯತಿ ರಾಜ್ಯವು ಜನತೆಗೆ ಸೇವೆ
ಸಲ್ಲಿಸಲು ಅವರಿಗೆ ಹೊಸ ವಿಧಾನವನ್ನು ಕಲ್ಪಿಸಿ
ಕೊಟ್ಟಿದೆ.

# ಉಪನ್ಯಾಸ ಗ್ರಂಥಮಾಲೆಯ

## ಇತ್ತೀಚಿನ ಪ್ರಕಟನೆಗಳು

**ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ**

೧. ಕಿವಿ, ಮೂಗು, ಗಂಟಲಿನ
ಸಾಮಾನ್ಯ ರೋಗಗಳು —ಎಂ. ವ್ಹಿ. ವೆಂಕಟೇಶಮೂರ್ತಿ
೨. ಸ್ಥಳಿಕ ಗಳಗಂಡ —ಪಿ. ಎಸ್. ಶಂಕರ
೩. ಜನಸಂಖ್ಯಾ ಸ್ಫೋಟ ಮತ್ತು
ಅಂತರಾಷ್ಟ್ರೀಯ ಜನಸಂಖ್ಯಾ ವರ್ಷ—ಪಿ. ಬಿ. ಅಂಗಡಿ
೪. ಕುಕನೂರು —ಎಸ್. ಎಲ್. ಶಾಂತಕುಮಾರಿ
೫. ಜಗನ್ನಾಥದಾಸರ ಹಿರಿಮೆ —ವಸಂತ ಕುಷ್ಟಗಿ
೬. ನವಭಾರತ ನಿರ್ಮಾಪಕ
ರಾಜಾರಾಮ ಮೋಹನರಾಯ —ಜಿ. ಜಿ. ಕಾಡದೇವರ
೭. ಭಾರತೀಯ ಸಂವಿಧಾನದಲ್ಲಿ
ಮೂಲಭೂತ ಹಕ್ಕುಗಳು —ಶಿವಾನಂದ ಗುಬ್ಬಣ್ಣವರ
೮. ಭಾರತದ ಆರ್ಥಿಕ ಬೆಳವಣಿಗೆಯ
ಗುಣದೋಷಗಳು —ಡಿ. ಎ. ಹೆಗಡೆ
೯. ಸಸ್ಯಪೋಷಕಗಳು —ಸಾ. ನಾ. ವಜ್ರನಾಭಯ್ಯ
೧೦. ಕೌಟಿಲ್ಯನ ಅರ್ಥಶಾಸ್ತ್ರ —ಅರವಿಂದ ಜೋಶಿ

---

ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ